

ಕರ್ನಾಟಕ ಸರ್ಕಾರ

Agriculture Dept.

## ಕೃಷಿ ಇಲಾಖೆ

# ವಾರ್ಷಿಕ ವರದಿ

೧೯೯೪-೯೫

# ಕೃಷಿ ಇಲಾಖೆಯ
# ವಾರ್ಷಿಕ ವರದಿ – 1994–95

—:—

# ಕೃಷಿ ಇಲಾಖೆಯ

## ವಾರ್ಷಿಕ ವರದಿ – 1994–95

—:—

ರಾಜ್ಯದ ಪ್ರಮುಖ ಆದಾಯ ಮೂಲಗಳಲ್ಲಿ ಕೃಷಿಯು ಒಂದಾಗಿದ್ದು, ಅದು ನಮ್ಮ ರಾಜ್ಯದ ಬಹುಪಾಲು ಜನರ ಜೀವನೋಪಾಯವಾಗಿ ಮುಂದುವರಿದಿದೆ. ಕೃಷಿ ಇಲಾಖೆಯ ಮುಖ್ಯ ಹೊಣೆಗಾರಿಕೆಯು, ರಾಜ್ಯದಲ್ಲಿ ಬೆಳೆಯುತ್ತಿರುವ ಜನಸಂಖ್ಯೆಯ ಬೇಡಿಕೆಯನ್ನು ಸರಿದೂಗಿಸಲು ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದಕ್ಕಾಗಿ ಪ್ರಯೋಗಾಲಯಗಳಲ್ಲಿ, ರಾಜ್ಯ ಕೃಷಿ ಸಂಶೋಧನಾ ಕೇಂದ್ರಗಳಲ್ಲಿ ಹಾಗೂ ಇತರೆಡೆಗಳಲ್ಲಿ ಹೊರಹೊಮ್ಮುವ ಸಂಶೋಧನಾ ಫಲಿತಾಂಶಗಳನ್ನು ಮಳೆಯಾಶ್ರಿತ ಹಾಗೂ ನೀರಾವರಿಯಲ್ಲಿನ ಸುಮಾರು 105 ಲಕ್ಷ ಹೆಕ್ಟೇರುಗಳಲ್ಲಿ ಸಾಗುವಳಿ ಮಾಡುವ 57.76 ಲಕ್ಷ ರೈತ ಕುಟುಂಬಗಳಿಗೆ ವರ್ಗಾಯಿಸುವುದಾಗಿದೆ.

ಈ ಪ್ರಮುಖ ಹೊಣೆಗಾರಿಕೆಯನ್ನು ನಿರ್ವಹಿಸಲು ಸಾಕಷ್ಟು ಕ್ಷೇತ್ರ ಸಿಬ್ಬಂದಿ ಮತ್ತು ಅದಕ್ಕೆ ಅನುಗುಣವಾದ ಮಧ್ಯಮ ಹಾಗೂ ಉನ್ನತ ಶ್ರೇಣಿಯ ಉಸ್ತುವಾರಿ ಸಿಬ್ಬಂದಿಯೊಂದಿಗೆ ಇಲಾಖೆಯನ್ನು ಕಾಲಕ್ರಮೇಣದಲ್ಲಿ ಬಲಪಡಿಸಲಾಗಿದೆ. ವಿಶ್ವಬ್ಯಾಂಕ್ ನೆರವಿನ ತರಬೇತಿ ಮತ್ತು ಭೇಟಿ ಪದ್ಧತಿಯನ್ನು 1978ರಲ್ಲಿ ಜಾರಿಗೆ ತರುವುದರೊಂದಿಗೆ ಎಲ್ಲಾ ವರ್ಗಗಳ ರೈತ ಬಾಂಧವರಿಗೆ ತಾಂತ್ರಿಕತೆಯನ್ನು ಕ್ಷಿಪ್ರಗತಿಯಲ್ಲಿ ವರ್ಗಾವಣೆ ಮಾಡುವುದಕ್ಕಾಗಿ ಒಂದು ಕ್ರಿಯಾಶೀಲ ಹಂದರವನ್ನು ದ್ವೈಮಾಸಿಕ ಹಾಗೂ ಮಾಸಿಕ ಕಾರ್ಯಾಗಾರಗಳ ಮೂಲಕ ಒದಗಿಸಲು ಉದ್ದೇಶಿಸಲಾಯಿತು.

ಪ್ರತಿ ಕೃಷಿ ಪರಿಸರ ಪರಿಸ್ಥಿತಿಗಳಿಗೆ ಹೊಂದಾಣಿಕೆಯಾಗುವಂತೆ ಬೆಳೆ ವಿಧಾನಗಳನ್ನು ಅಭಿವೃದ್ಧಿಪಡಿಸಲಾಗಿದೆ. ಪ್ರತಿ ಬೆಳೆಯ ಬೆಳೆ ವಲಯಗಳ ವಿಂಗಡಣೆಯನ್ನು ಮಾಡಲಾಗಿದೆ, ಅಧಿಕ ಉತ್ಪಾದನೆಗಾಗಿ ವಿವಿಧ ಒತ್ತು ಕಾರ್ಯಕ್ರಮಗಳನ್ನು ಆಯಾ ಬೆಳೆ ವಲಯಗಳಿಗೆ ಸೀಮಿತಗೊಳಿಸಿ, ಅನುಷ್ಠಾನಗೊಳಿಸಲಾಗಿದೆ. ಈ ಬೆಳೆ ಪದ್ಧತಿಯು ಏಕದಳ ಧಾನ್ಯ, ಬೇಳೆಕಾಳು, ಎಣ್ಣೆಕಾಳು, ಹತ್ತಿ, ಕಬ್ಬು ಮತ್ತು ತಂಬಾಕು ಬೆಳೆಗಳ ಉತ್ತಮ ಉತ್ಪಾದನೆಗೆ ಸಹಕಾರಿಯಾಯಿತು. ಎಣ್ಣೆಕಾಳು ಹಾಗೂ ಬೇಳೆಕಾಳುಗಳಡಿಯಲ್ಲಿ ಬಹುಬೆಳೆ, ಒಂದು ಬೆಳೆ ಇದ್ದಂತೆ ಮತ್ತೊಂದು ಬೆಳೆ ಬೆಳೆಯುವ ಹಾಗೂ ಅಂತರದ ಬೆಳೆ ಪದ್ಧತಿಗಳಲ್ಲಿ ಸುಭದ್ರತೆಯನ್ನು ಕಂಡುಕೊಂಡಿದೆ, ಆ ಪದಾರ್ಥಗಳ ಸಮತೋಲನ ಉತ್ಪಾದನೆಯನ್ನು ಪಡೆಯಲಾಗುತ್ತಿದೆ.

ರಾಜ್ಯದಲ್ಲಿನ 1993–94ನೇ ಸಾಲಿನ ಆಹಾರಧಾನ್ಯಗಳ ಉತ್ಪಾದನೆಯು 84.88 ಲಕ್ಷ ಟನ್ನುಗಳಾಗಿದೆ, 19.16 ಲಕ್ಷ ಟನ್ನು ಎಣ್ಣೆಕಾಳು, 7.54 ಲಕ್ಷ ಬೇಲು ಹತ್ತಿ, 210.73 ಲಕ್ಷ ಟನ್ನು ಕಬ್ಬು, 0.47 ಲಕ್ಷ ಟನ್ನು ತಂಬಾಕು ಉತ್ಪಾದನೆಯಾಗಿರುತ್ತದೆ. ಹಾಗೂ ರಾಜ್ಯದ 1994–95ರ ಕೃಷಿ ಉತ್ಪಾದನಾ ಗುರಿಗಳು ಈ ಕೆಳಗಿನಂತಿವೆ:—

| | | | |
|---|---|---|---|
| ಆಹಾರಧಾನ್ಯಗಳು | .. | 82.00 | ಲಕ್ಷ ಟನ್ನುಗಳು |
| ಎಣ್ಣೆಕಾಳು | .. | 19.00 | —"— |
| ಕಬ್ಬು | .. | 215.00 | —"— |
| ಹತ್ತಿ | .. | 9.40 | ಲಕ್ಷ ಬೇಲುಗಳು |
| ತಂಬಾಕು | .. | 0.47 | ಲಕ್ಷ ಟನ್ನುಗಳು |

ಕಾಲಾನುಕ್ರಮದಲ್ಲಿ ವ್ಯವಸಾಯ ಕ್ಷೇತ್ರ ಅನೇಕ ಬದಲಾವಣೆಗಳನ್ನು ಕಂಡಿದೆ. ಅವುಗಳಲ್ಲಿ ಕೆಲವು ಅದರ ರಚನೆಯಲ್ಲಿ ಹಾಗೂ ಹೆಚ್ಚಿನದನ್ನು ಅದರ ವಾಸ್ತವಿಕತೆ ಮತ್ತು ಉತ್ಪಾದಕತೆಯಲ್ಲಿ. ರಾಜ್ಯವು ಇದೀಗ ಏಕದಳ ಧಾನ್ಯಗಳಿಗೆ ಸಂಬಂಧಿಸಿದಂತೆ ಸ್ವಾವಲಂಬಿಯಾಗಿದೆ. ಆದರೆ ಎಣ್ಣೆಕಾಳು ಹಾಗೂ ಬೇಳೆಕಾಳುಗಳಲ್ಲಿ ಸ್ವಾವಲಂಬನೆಯನ್ನು ಇನ್ನೂ ಸಾಧಿಸಬೇಕಿದೆ. ಇದನ್ನು ಸಾಧಿಸಲು ವಿಶೇಷ ಒತ್ತು ಕಾರ್ಯಕ್ರಮಗಳ ಮೂಲಕ ಪ್ರಯತ್ನಿಸಲಾಗುತ್ತಿದೆ.

ಕೃಷಿ ಇಲಾಖೆಯ ಪ್ರಮುಖ ಕಾರ್ಯ ಚಟುವಟಿಕೆಗಳನ್ನು ಈ ರೀತಿ ವಿಂಗಡಿಸಬಹುದು:—

(1) ತಾಂತ್ರಿಕತೆಯ ವರ್ಗಾವಣೆ

(2) ಕೃಷಿ ಸಾಮಗ್ರಿಗಳ ಪೂರೈಕೆ ಕಾರ್ಯಕ್ರಮ

ಮತ್ತು

(3) ಇತರೆ ತಾಂತ್ರಿಕ ಸೇವೆಗಳನ್ನು ಒದಗಿಸುವುದು.

1994–95ನೇ ಸಾಲಿನ ಬೆಳೆ ಉತ್ಪಾದನಾ ಕಾರ್ಯಕ್ರಮಗಳ ಪರಾಮರ್ಶೆ :–

1994–95ರ ಸಾಲಿಗೆ ನಿಗದಿಪಡಿಸಿದ್ದ ವಿವಿಧ ಕೃಷಿ ಬೆಳೆಗಳ ಉತ್ಪಾದನಾ ಗುರಿಗಳು ಈ ಕೆಳಗಿನಂತಿರುತ್ತವೆ:–

| | | |
|---|---|---|
| 1) ಏಕದಳ ಧಾನ್ಯಗಳು | .. 76·50 | ಲಕ್ಷ ಟನ್ನುಗಳು |
| 2) ಬೇಳೆಕಾಳುಗಳು | .. 5·50 | —"— |
| 3) ಎಣ್ಣೆಕಾಳುಗಳು | .. 19·00 | —"— |
| 4) ಕಬ್ಬು | ..215·00 | —"— |
| 5) ಹತ್ತಿ | .. 9·00 | ಲಕ್ಷ ಬೇಲುಗಳು (ಬೇಲಿಗೆ 170 ಕೆ·ಜಿ·) |
| 6) ತಂಬಾಕು | .. 0·47 | ಲಕ್ಷ ಟನ್ನುಗಳು |

1994–95ನೇ ಸಾಲಿನ ವಿವಿಧ ಬೆಳೆಗಳ ವಿಸ್ತೀರ್ಣ ಮತ್ತು ಉತ್ಪಾದನೆಯ ಗುರಿ ಮತ್ತು ತಾತ್ಕಾಲಿಕ ಅಂದಾಜುಗಳನ್ನು ಅನುಬಂಧ–1ರಲ್ಲಿ ನೀಡಲಾಗಿದೆ·

ರಾಜ್ಯದಲ್ಲಿ 1139 ಎಂ·ಎಂ· ವಾಡಿಕೆ ಮಳೆಗೆ ಪ್ರತಿಯಾಗಿ 1994–95ರಲ್ಲಿ 1231 ಎಂ·ಎಂ·ಮಳೆಯಾಗಿರುತ್ತದೆ· 1993–94ರ ಅವಧಿಯಲ್ಲಿ 1137 ಎಂ·ಎಂ·ಮಳೆಯಾಗಿತ್ತು·

ಹವಾಮಾನ ಪರಿಸ್ಥಿತಿ :–

ಮುಂಗಾರು :–

ಮಳೆ :– ರಾಜ್ಯದ ಬಹುತೇಕ ಪ್ರದೇಶಗಳಲ್ಲಿ ಮುಂಗಾರು ಪೂರ್ವ ಮಳೆಯು (ಏಪ್ರಿಲ – ಮೇ) ಅಷ್ಟೇನು ತೃಪ್ತಿಕರವಾಗಿರಲಿಲ್ಲ· ಏಪ್ರಿಲ ಮತ್ತು ಮೇ ತಿಂಗಳ ವಾಡಿಕೆ ಮಳೆಯು ಅನುಕ್ರಮವಾಗಿ 38 ಮತ್ತು 87 ಎಂ·ಎಂ· ಆಗಿದ್ದು, ಇದಕ್ಕೆ ಪ್ರತಿಯಾಗಿ 1994ರ ಏಪ್ರಿಲ ಮತ್ತು ಮೇ ತಿಂಗಳುಗಳಲ್ಲಿ

54 ಎಂ.ಎಂ. ಮತ್ತು 55 ಎಂ.ಎಂ. ಮಳೆಯಾಗಿರುತ್ತದೆ.

ನೈರುತ್ಯ ಮುಂಗಾರು ಮಾರುತವು ಸಕಾಲಕ್ಕೆ ಅಂದರೆ ಜೂನ್,94ರ ಮೊದಲ ವಾರದಲ್ಲಿ ಪ್ರಾರಂಭವಾಗಿರುತ್ತದೆ. ಇದರ ಪ್ರಭಾವದಿಂದ ಕರಾವಳಿ, ಮಲೆನಾಡು, ಮೈಸೂರು, ಬೆಳಗಾವಿ, ಭಾಗಶ: ಬಿಜಾಪುರ, ಧಾರವಾಡ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ವ್ಯಾಪಕ ಮಳೆಯಾಗಿರುತ್ತದೆ. ಈ ಅವಧಿಯಲ್ಲಿ ಬಿದ್ದ ಮಳೆಯು 239 ಎಂ.ಎಂ. ಆಗಿದ್ದು, ಇದು ವಾಡಿಕೆ ಮಳೆಗಿಂತ (182 ಎಂ.ಎಂ.) ಹೆಚ್ಚಾಗಿರುತ್ತದೆ. ಆದರೆ ನೈರುತ್ಯ ಮಾರುತವು ಜೂನ್ ತಿಂಗಳ ಎರಡನೇ ವಾರದಿಂದ ಬಳ್ಳಾರಿ, ಗುಲಬರ್ಗಾ, ಬೀದರ, ರಾಯಚೂರು, ತುಮಕೂರು, ಕೋಲಾರ, ಬೆಂಗಳೂರು ಮತ್ತು ಭಾಗಶ: ಧಾರವಾಡ, ಚಿತ್ರದುರ್ಗ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ದುರ್ಬಲವಾಗಿತ್ತು. ಕರಾವಳಿ ಜಿಲ್ಲೆಗಳಲ್ಲಿ ಮುಂಗಾರು ಚುರುಕಾಗಿದ್ದು, ಜೂನ್ ತಿಂಗಳ 28, 29 ಮತ್ತು 30ರಂದು ಸತತವಾಗಿ ಹಾಗೂ ಭಾರಿ ಮಳೆಯಾಗಿರುತ್ತದೆ. ಈ ಮಳೆಯಿಂದಾಗಿ ದಕ್ಷಿಣಕನ್ನಡ ಜಿಲ್ಲೆಯ ತಗ್ಗು ಪ್ರದೇಶಗಳಲ್ಲಿ ನಾಟಿ ಮಾಡಿದ ಭತ್ತದ ಬೆಳೆ ಮತ್ತು ಸಸಿಮಡಿಗಳು ನೀರಿನಲ್ಲಿ ಮುಳುಗಿ ಹೆಚ್ಚಿನ ನಷ್ಟ ಉಂಟಾಗಿರುತ್ತದೆ.

1994ರ ಜುಲೈ ತಿಂಗಳ ಮೊದಲ ವಾರದಲ್ಲಿ ಮಳೆಯ ಪರಿಸ್ಥಿತಿಯು ಬೆಂಗಳೂರು, ಕೋಲಾರ, ಬಳ್ಳಾರಿ, ಬೀದರ, ಗುಲಬರ್ಗಾ ಮತ್ತು ಧಾರವಾಡ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಸ್ವಲ್ಪ ಮಟ್ಟಿಗೆ ಸುಧಾರಿಸಿತು. ಪುನ: ಜುಲೈ ತಿಂಗಳ ಎರಡನೇ ವಾರದಲ್ಲಿ (10ರಿಂದ 15ರ ವರೆಗೆ) ನೈರುತ್ಯ ಮುಂಗಾರು ಮಾರುತವು ಕರಾವಳಿ ಮತ್ತು ಮಲೆನಾಡು ಜಿಲ್ಲೆಗಳಲ್ಲಿ ಚುರುಕಾಗಿತ್ತು. ಅನೇಕ ಪ್ರದೇಶಗಳಲ್ಲಿ ಭಾರಿಯಿಂದ ವಿಪರೀತ ಹಾಗೂ ಸತತ

ಮಳೆಯಾಗಿರುತ್ತದೆ. (ಪ್ರತಿ ದಿನ 15 ರಿಂದ 35 ಸೆಂ.ಮೀ.) ಇದರಿಂದ ಬೆಳೆಗಳು ಕೊಚ್ಚಿಕೊಂಡು ಹೋಗಿವೆ. ಅಲ್ಲದೆ ಬೆಳೆ ಪ್ರದೇಶವು ಜಾಗು ಮತ್ತು ಮರಳು:ಹೂಳಿನಿಂದ ತುಂಬಿತ್ತು. ಕೃಷ್ಣಾ, ಭೀಮ, ಘಟಪ್ರಭಾ, ತುಂಗಭದ್ರಾ, ಭದ್ರಾ ಮತ್ತು ಕಪಿಲಾ ನದಿಗಳಲ್ಲಿ ಪ್ರವಾಹವುಂಟಾಗಿ, ನದಿ ದಡದ ಪ್ರದೇಶಗಳಲ್ಲಿ ಬೆಳೆದ ಬೆಳೆಗಳಿಗೆ ಹಾನಿಯಾಗಿರುತ್ತದೆ. ಮೂರು ಮತ್ತು ನಾಲ್ಕನೇ ವಾರದಲ್ಲಿ ಕರಾವಳಿ ಮತ್ತು ಮಲೆನಾಡು ಪ್ರದೇಶಗಳಲ್ಲಿ ಹಾಗೂ ರಾಜ್ಯದ ಉತ್ತರ ಒಳನಾಡು ಮತ್ತು ದಕ್ಷಿಣ ಒಳನಾಡಿನ ಕೆಲವು ಭಾಗದಲ್ಲಿ ಉತ್ತಮ ಮಳೆಯಾಗಿರುತ್ತದೆ.

ರಾಜ್ಯದಲ್ಲಿ ಜುಲೈ ತಿಂಗಳಿನಲ್ಲಿ ವಾಡಿಕೆಮಳೆಯಾದ 285 ಎಂ.ಎಂ.ಗೆ ಪ್ರತಿಯಾಗಿ 356 ಎಂ.ಎಂ. ಮಳೆಯಾದರೂ ಹಂಚಿಕೆಯು ಸಮರ್ಪಕವಾಗಿರಲಿಲ್ಲ. ಗುಲ್ಬರ್ಗಾ, ಬೀದರ, ರಾಯಚೂರು ಜಿಲ್ಲೆಯ ಬಹುತೇಕ ಪ್ರದೇಶ ಹಾಗೂ ಬಿಜಾಪುರ, ಬಳ್ಳಾರಿ, ಕೋಲಾರ, ಮಂಡ್ಯ, ತುಮಕೂರು ಮತ್ತು ಬೆಂಗಳೂರು ಜಿಲ್ಲೆಗಳ ಕೆಲವು ಪ್ರದೇಶಗಳಲ್ಲಿ ಸಾಕಷ್ಟು ಮಳೆಯಾಗಲಿಲ್ಲ. ಇದರಿಂದ ಬಿತ್ತನೆ ಕಾರ್ಯವು ಚುರುಕಾಗಿರಲಿಲ್ಲ.

1994ರ ಆಗಸ್ಟ ತಿಂಗಳಿನಲ್ಲಿ, ಕರಾವಳಿಯ ಬಹುತೇಕ ಪ್ರದೇಶಗಳು, ಮಲೆನಾಡು (ಹಾಸನದ ಕೆಲವು ಭಾಗಗಳನ್ನು ಹೊರತುಪಡಿಸಿ), ಬೆಳಗಾವಿ, ಧಾರವಾಡ, ಗುಲ್ಬರ್ಗಾ ಜಿಲ್ಲೆಗಳಲ್ಲಿ ಸಾಮಾನ್ಯ : ಅಧಿಕ ಮಳೆಯಾಗಿರುತ್ತದೆ. ಇತರೆ ಜಿಲ್ಲೆಗಳಲ್ಲಿ ಮಳೆಯು ಕಡಿಮೆಯಾಗಿತ್ತು. ಇಲ್ಲವೇ ಅಭಾವ ಪರಿಸ್ಥಿತಿ ತಲೆದೋರಿತ್ತು. ರಾಜ್ಯದ 190 ಎಂ.ಎಂ. ವಾಡಿಕೆಮಳೆಗೆ ಪ್ರತಿಯಾಗಿ 163 ಎಂ.ಎಂ.ಸರಾಸರಿ ಮಳೆಯಾಗಿರುತ್ತದೆ.

1994ರ ಸೆಪ್ಟೆಂಬರ ತಿಂಗಳಿನಲ್ಲಿ ಮಲೆನಾಡಿನ ಕೆಲವು ಭಾಗಗಳಲ್ಲಿ ಮತ್ತು ಮೈಸೂರು ಜಿಲ್ಲೆಯಲ್ಲಿ ಮಾತ್ರ ಸಾಮಾನ್ಯ ಮಳೆಯಾಗಿರುತ್ತದೆ. ಆದರೆ ಉಳಿದ ಬಹುತೇಕ ಪ್ರದೇಶದಲ್ಲಿ ಕಡಿಮೆ ಮಳೆಯಾಗಿತ್ತು. ಇಲ್ಲಿಯೇ ಅಭಾವ ಪರಿಸ್ಥಿತಿ ತಲೆದೋರಿತ್ತು. ರಾಜ್ಯದ 150 ಎಂ.ಎಂ. ವಾಡಿಕೆ ಮಳೆಗೆ ಪ್ರತಿಯಾಗಿ 83 ಎಂ.ಎಂ. ಸರಾಸರಿ ಮಳೆಯಾಗಿರುತ್ತದೆ. ಆದರೆ ಬಂಗಾಳಕೊಲ್ಲಿಯಲ್ಲಿ ಉಂಟಾದ ವಾಯುಭಾರ ಕುಸಿತದಿಂದಾಗಿ ಮತ್ತು ತದನಂತರ ರಾಜ್ಯದ ದಕ್ಷಿಣ ಒಳನಾಡಿನ ಬಹುತೇಕ ಪ್ರದೇಶಗಳಾದ ಮೈಸೂರು, ಮಂಡ್ಯ, ಕೋಲಾರ, ತುಮಕೂರು, ಬೆಂಗಳೂರು ಮತ್ತು ಉತ್ತರ ಒಳನಾಡಿನ ಬಳ್ಳಾರಿ, ಗುಲ್ಬರ್ಗಾ, ರಾಯಚೂರು, ಬೀದರ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಮಳೆಯಾಗಿರುತ್ತದೆ.

ಅಕ್ಟೋಬರ 9ು2 ಎಂ.ಎಂ.ವಾಡಿಕೆ ಮಳೆಗೆ ಪ್ರತಿಯಾಗಿ ಮುಂಗಾರು ಹಂಗಾಮಿನಲ್ಲಿ 950 ಎಂ.ಎಂ. ಮಳೆಯಾಗಿರುತ್ತದೆ. ಬಿದ್ದ ಮಳೆಯು ವಾಡಿಕೆ ಮಳೆಯಷ್ಟೇ ಇದ್ದರೂ ಸಹ ಹಂಚಿಕೆಯು ಸಮರ್ಪಕವಾಗಿರಲಿಲ್ಲ ಮತ್ತು ಏರುಪೇರಿನಿಂದ ಕೂಡಿತ್ತು. ಕರಾವಳಿ, ಮಲೆನಾಡು, ಬೆಳಗಾವಿ ಹಾಗೂ ಧಾರವಾಡ ಮತ್ತು ಮೈಸೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಮಾತ್ರ ವಾಡಿಕೆಯಷ್ಟು ಅಥವಾ ಅದಕ್ಕಿಂತಲೂ ಹೆಚ್ಚು ಮಳೆಯಾಗಿರುತ್ತದೆ. ಬಿಜಾಪುರ, ರಾಯಚೂರು, ಗುಲ್ಬರ್ಗಾ, ಬೀದರ, ಬಳ್ಳಾರಿ, ಮಂಡ್ಯ, ತುಮಕೂರು, ಕೋಲಾರ, ಬೆಂಗಳೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಆಗಿಂದಾಗ್ಯೆ ದೀರ್ಘವಧಿ ಒಣಹವೆ ತಲೆದೋರಿತ್ತು. ಇದರಿಂದಾಗಿ ಮಳೆಯಾಶ್ರಿತ ಬೆಳೆಗಳ ಬಿತ್ತನೆ ಕಾರ್ಯಕ್ಕೆ ಹಾಗೂ ಉತ್ಪಾದನೆಗೆ ತೊಡಕುಂಟಾಗಿರುತ್ತದೆ.

ಬೆಳೆ ಪರಿಸ್ಥಿತಿ :—

ಸಾಕಷ್ಟು ಮಳೆಯಾದ ಪ್ರದೇಶಗಳಲ್ಲಿ ಬೆಳೆ ಪರಿಸ್ಥಿತಿಯು ಸಾಮಾನ್ಯವಾಗಿತ್ತು. ಕರಾವಳಿ ಮತ್ತು ಮಲೆನಾಡು ಜಿಲ್ಲೆಗಳು ಮತ್ತು ಬೆಳಗಾವಿ, ಬಿಜಾಪುರ, ಧಾರವಾಡ, ಮೈಸೂರು, ಬಳ್ಳಾರಿ, ಗುಲಬರ್ಗಾ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಬದಂ ಭಾರಿ ಮಳೆ : ಪ್ರವಾಹದಿಂದಾಗಿ ಒಂದು ಲಕ್ಷ ಹೆಕ್ಟೇರಿಗೂ ಹೆಚ್ಚಿನ ಪ್ರದೇಶದಲ್ಲಿ ಬೆಳೆಯಲಾದ ಭತ್ತ, ಹತ್ತಿ, ಸೂರ್ಯಕಾಂತಿ, ಅವರೆ, ಜೋಳ, ಮುಸುಕಿನ ಜೋಳ ಮುಂತಾದ ಬೆಳೆಗಳಿಗೆ ಹಾನಿ ಉಂಟಾಯಿತು. 1994ರ ಜುಲೈ ತಿಂಗಳ ಎರಡನೇ ವಾರದಲ್ಲಿ ಬಳ್ಳಾರಿ, ಗುಲಬರ್ಗಾ, ರಾಯಚೂರು, ಬೀದರ ಜಿಲ್ಲೆಗಳಲ್ಲಿ ಹಾಗೂ ಚಿತ್ರದುರ್ಗ, ಮಂಡ್ಯ, ಬಿಜಾಪುರ, ತುಮಕೂರು, ಮೈಸೂರು, ಧಾರವಾಡ, ಬೆಂಗಳೂರು, ಕೋಲಾರ ಮತ್ತು ಹಾಸನ ಜಿಲ್ಲೆಗಳ ಕೆಲವು ಪ್ರದೇಶಗಳಲ್ಲಿ ಬೆಳೆದ ಮಳೆಯಾಶ್ರಿತ ಬೆಳೆಗಳು ತೇವಾಂಶದ ಕೊರತೆಯಿಂದ ಬಳಲಿದವು. ಆಗಿಂದಾಗ್ಯೆ ತಲೆದೋರಿದ ಒಣಹವೆಯಿಂದಾಗಿ 15.45 ಲಕ್ಷ ಹೆಕ್ಟೇರುಗಳಲ್ಲಿ ಬೆಳೆದ ಬೆಳೆಗಳಿಗೆ ಹಾನಿಯುಂಟಾಗಿದೆಯೆಂದು ವರದಿಯಾಗಿದೆ.

ಆವರಿಸಿದ ಬೆಳೆ ವಿಸ್ತೀರ್ಣ :—

ಮುಂಗಾರು ಹಂಗಾಮಿನಲ್ಲಿ ವಿವಿಧ ಬೆಳೆಗಳಿಂದುಲ್ಲಿ ಬಿತ್ತನೆಯಾದ ವಿಸ್ತೀರ್ಣವು 60.03 ಲಕ್ಷ ಹೆಕ್ಟೇರುಗಳಾಗಿರುತ್ತದೆ ಇದು ಮುಂಗಾರು ಹಂಗಾಮಿನ ವಾರ್ಷಿಕ ಕ್ಷೇತ್ರದ (71.60 ಲಕ್ಷ ಹೆಕ್ಟೇರು) ಪ್ರತಿಶತ 84 ರಷ್ಟಾಗಿರುತ್ತದೆ.

ಹಿಂಗಾರು ಹಂಗಾಮಿನ ಹವಾಮಾನ ಪರಿಸ್ಥಿತಿ :—

ರಾಜ್ಯದಲ್ಲಿ ಹಿಂಗಾರು ಹಂಗಾಮಿನ ಆಹಾರಧಾನ್ಯಗಳ ಉತ್ಪಾದನೆಯು ಉಂಟಾಸಲ್ಸ ಸೆಪ್ಟೆಂಬರ ತಿಂಗಳಿನಲ್ಲಿ ಬೀಳುವ ಮಳೆ ಮತ್ತು ಅಕ್ಟೋಬರನಿಂದ ಡಿಸೆಂಬರ ತಿಂಗಳುಗಳ ವರೆಗಿನ

ಈಶಾನ್ಯ ಮಾರುತವನ್ನು ಅವಲಂಬಿಸಿರುತ್ತದೆ. ಸಕಾಲದಲ್ಲಿ ಮತ್ತು ಅನುಕೂಲಕರವಾದ ಮಳೆಯು ನಿರೀಕ್ಷೆಯೊಂದಿಗೆ ಹಾಗೂ ಮುಂಗಾರು ಹಂಗಾಮಿನಲ್ಲಿ ಬೆಳೆಯು ಆವರಿಸಿದ ಕ್ಷೇತ್ರದಲ್ಲಿ ಉಂಟಾದ ಕಡಿತವನ್ನು ಗಮನದಲ್ಲಿಟ್ಟುಕೊಂಡು ಹಿಂಗಾರು ಹಂಗಾಮಿನ ಗುರಿಗಳನ್ನು ಸೂಕ್ತವಾಗಿ ಪರಿಷ್ಕರಿಸಲಾಯಿತು. ಅದರಂತೆ 12.68 ಲಕ್ಷ ಟನ್ನುಗಳ ಏಕದಳ ಧಾನ್ಯಗಳನ್ನು, 2.82 ಲಕ್ಷ ಟನ್ನು ಬೇಳೆಕಾಳು ಮತ್ತು 4.00 ಲಕ್ಷ ಟನ್ನು ಎಣ್ಣೆಕಾಳುಗಳನ್ನು ಅನುಕ್ರಮವಾಗಿ 19.22 ಲಕ್ಷ ಹೆ. 7.62 ಲಕ್ಷ ಹೆಕ್ಟೇರು ಮತ್ತು 9.56 ಲಕ್ಷ ಹೆಕ್ಟೇರುಗಳಿಂದ ಉತ್ಪಾದಿಸುವ ಗುರಿಯನ್ನು ಹೊಂದಲಾಗಿತ್ತು. ಗುಲ್ಬರ್ಗ ರಾಯಚೂರು, ಬೀದರ, ಬಳ್ಳಾರಿ, ಬೆಳಗಾವಿ, ಬಿಜಾಪುರ, ಧಾರವಾಡ ಮತ್ತು ಚಿತ್ರದುರ್ಗ ಜಿಲ್ಲೆಗಳು ಹಿಂಗಾರಿ ಬೆಳೆಗಳನ್ನು ಬೆಳೆಯುವ ಪ್ರಮುಖ ಜಿಲ್ಲೆಗಳಾಗಿರುತ್ತವೆ. ರಾಜ್ಯದ ಇತರೆ ಕೆಲವು ಪ್ರದೇಶಗಳಲ್ಲೂ ಸಹ ಹಿಂಗಾರಿ ಬೆಳೆಗಳನ್ನು ಬೆಳೆಯಲಾಗುತ್ತದೆ.

ಮಳೆ:-

ಬಂಗಾಳಕೊಲ್ಲಿಯಲ್ಲಿ ಸೆಪ್ಟೆಂಬರ ತಿಂಗಳ ಕೊನೆಯ ಮೂರು ದಿನಗಳು ಹಾಗೂ ಅಕ್ಟೋಬರ ತಿಂಗಳ ಮೊದಲ ವಾರದಲ್ಲಿ ತಲೆದೋರಿದ ವಾಯುಭಾರ ಕುಸಿತದಿಂದಾಗಿ, ರಾಜ್ಯದ ಬಹುತೇಕ ಪ್ರದೇಶಗಳಲ್ಲಿ ಉತ್ತಮ ಹಂಚಿಕೆಯಿಂದ ಕೂಡಿದ ಸಕಾಲಿಕ ಮಳೆಯಾಗಿರುತ್ತದೆ. ಈಶಾನ್ಯ ಮಾರುತವು ಅಕ್ಟೋಬರ ತಿಂಗಳ 19ರಿಂದ ಪ್ರಾರಂಭವಾಯಿತು. ಈಶಾನ್ಯ ಮಾರುತದ ಪ್ರಾರಂಭದಿಂದಾಗಿ ಅಕ್ಟೋಬರ ತಿಂಗಳಿನಲ್ಲಿ ರಾಜ್ಯದಾದ್ಯಂತ ವ್ಯಾಪಕ ಮಳೆಯಾಗಿರುತ್ತದೆ. ಈ ಅವಧಿಯಲ್ಲಿ ಬಿದ್ದ ಮಳೆಯು 246 ಎಂ.ಎಂ.ಆಗಿದ್ದು, ವಾಡಿಕೆಮಳೆಗಿಂತ (134 ಎಂ.ಎಂ.) ಹೆಚ್ಚಾಗಿರುತ್ತದೆ.

1994ರ ನವೆಂಬರ ತಿಂಗಳಿನಲ್ಲಿ ಬೆಳಗಾವಿ, ಧಾರವಾಡ, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳನ್ನು ಹೊರತುಪಡಿಸಿ, ಉಳಿದಂತೆ ರಾಜ್ಯದ ಬಹುತೇಕ ಪ್ರದೇಶಗಳಲ್ಲಿ ಸಾಮಾನ್ಯ : ಅಧಿ ಮಳೆಯಾಗಿರುತ್ತದೆ. ರಾಜ್ಯದಲಬಹುತೇಕ ಪ್ರದೇಶಗಳಲ್ಲಿ ನವೆಂಬರ ತಿಂಗಳ ಎರಡನೇ ವಾರದಿಂದಾಚೆಗೆ ಒಣಹವೆ ತಲೆದೋರಿತ್ತು. ಈ ಸಮಯದಲ್ಲಿ 43 ಎಂ.ಎಂ. ವಾಡಿಕೆ ಮಳೆಗೆ ಪ್ರತಿಯಾಗಿ ಕೇವಲ 20 ಎಂ.ಎಂ.ಮಳೆಯಾಗಿರುತ್ತದೆ.

ಬೆಂಗಳೂರು, ಕೋಲಾರ ಮತ್ತು ಚಿತ್ರದುರ್ಗ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಬಿದ್ದ ಅಲ್ಪಸ್ವಲ್ಪ ಮಳೆಯನ್ನು ಹೊರತು ಪಡಿಸಿ, ಉಳಿದಂತೆ ಸರ್ವೇಸಾಮಾನ್ಯವಾಗಿ ಒಣಹವೆಯು ಕಂಡು ಬಂತು.

ಒಟ್ಟಾರೆ ಹಿಂಗಾರು ಹಂಗಾಮಿನಲ್ಲಿ 185 ಎಂ.ಎಂ.ವಾಡಿ ಮಳೆಗೆ ಪ್ರತಿಯಾಗಿ 267 ಎಂ.ಎಂ.ಮಳೆಯಾಗಿರುತ್ತದೆ.

<u>ಹಿಂಗಾರು ಹಂಗಾಮಿನ ಬೆಳೆ ವಿಸ್ತೀರ್ಣ ಮತ್ತು ಬೆಳೆ ಪರಿಸ್ಥಿತಿ</u>:—

ಹಿಂಗಾರು ಹಂಗಾಮಿನಲ್ಲಿ ಡಿಸೆಂಬರ,94ರ ಅಂತ್ಯದ ವರೆ ವಿವಿಧ ಬೆಳೆಗಳಡಿಯಲ್ಲಿ ಬಿತ್ತನೆಯಾದ ವಿಸ್ತೀರ್ಣವು 36.64 ಲಕ್ಷ ಹೆಕ್ಟೇರುಗಳು. ಇದು ಹೊಂದಿದ್ದ ಗುರಿಯು (36.40 ಲಕ್ಷ ಹೆಕ್ಟೇರು) ಶೇ100.6ರಷ್ಟಾಗಿರುತ್ತದೆ. ರಾಯಚೂರು, ಬಳ್ಳಾರಿ, ಗುಲ್ಬರ್ಗ, ಚಿತ್ರದುರ್ಗ, ಬೀದರ ಜಿಲ್ಲೆಗಳಲ್ಲಿ ತಡವ ಬಿತ್ತನೆಯಾದ ಹಿಂಗಾರಿ ಜೋಳವನ್ನು ಹೊರತುಪಡಿಸಿ, ಉಳಿದ ಎಲ್ಲಾ ಹಿಂಗಾರಿ ಬೆಳೆಗಳ ಪರಿಸ್ಥಿತಿಯು ಸರ್ವೇಸಾಮಾನ್ಯವಾಗಿ ಉತ್ತಮವಾಗಿತ್ತು. ತಡವಾಗಿ ಬಿತ್ತನೆಯಾದ ಬೆಳೆಗಳು ತೇವಾಂ ಕೊರತೆಯನ್ನು ಅನುಭವಿಸಿದ್ದು, ಬೆಳೆಗಳ ಇಳುವರಿಯು ಮೇಲೆ ಪ್ರತಿಕೂಲ ಪರಿಣಾಮ ಉಂಟಾಗಿರುತ್ತದೆ.

ಬೇಸಿಗೆ ಹಂಗಾಮಿನ ನಿರೀಕ್ಷೆ:

ಅಕ್ಟೋಬರ್ ತಿಂಗಳಿನಲ್ಲಿ ಬಿದ್ದ ವ್ಯಾಪಕ ಮಳೆಯಿಂದಾಗಿ ದೊಡ್ಡ ಹಾಗೂ ಮಧ್ಯಮ ಗಾತ್ರದ ನೀರಾವರಿ ಜಲಾಶಯಗಳಲ್ಲಿನ ನೀರಾವರಿ ನೀರಿನ ಲಭ್ಯತೆಯು ತೃಪ್ತಿಕರವಾಗಿರುತ್ತದೆ. ಇದರಿಂದಾಗಿ ಬೇಸಿಗೆ ಹಂಗಾಮಿನ ನಿರೀಕ್ಷೆಯು ಸರ್ವೇ ಸಾಮಾನ್ಯವಾಗಿರುತ್ತದೆಂದು ಕಂಡು ಬರುತ್ತದೆ. ವಿವಿಧ ಬೇಸಿಗೆ ಬೆಳೆಗಳನ್ನು 6.48 ಹೆಕ್ಟೇರುಗಳಲ್ಲಿ ಬೆಳೆಯಲಾಗಿದೆ.

1995–96ರ ಉತ್ಪಾದನಾ ಕಾರ್ಯಕ್ರಮ:

1995–96ನೇ ಸಾಲಿನಲ್ಲಿ 80.55 ಲಕ್ಷ ಟನ್ನು ಏಕದಳ ಧಾನ್ಯಗಳು ಹಾಗೂ 7.45 ಲಕ್ಷ ಟನ್ನುಗಳ ಬೇಳೆ ಕಾಳುಗಳು ಸೇರಿದಂತೆ ಒಟ್ಟು 88.00 ಲಕ್ಷ ಟನ್ನುಗಳ ಆಹಾರ ಉತ್ಪಾದನೆಯನ್ನು ಮಾಡುವ ಗುರಿಯನ್ನು ಹೊಂದಲಾಗಿದೆ. ಎಣ್ಣೆ ಕಾಳುಗಳಿಗೆ ಸಂಬಂಧಿಸಿದಂತೆ ಉತ್ಪಾದನಾ ಗುರಿಯು 19.00 ಲಕ್ಷ ಟನ್ನುಗಳಾಗಿದ್ದು ಹತ್ತಿ, ಕಬ್ಬು ಮತ್ತು ತಂಬಾಕುಗಳ ಉತ್ಪಾದನಾ ಗುರಿಯು, ಕ್ರಮವಾಗಿ 9.00 ಲಕ್ಷ ಬೇಲುಗಳು, 263.36 ಲಕ್ಷ ಟನ್ನುಗಳು ಮತ್ತು 1.53 ಲಕ್ಷ ಟನ್ನುಗಳಷ್ಟಿರುತ್ತದೆ.

# ಅನುಬಂಧ – 1

1994–95ನೇ ಸಾಲಿನಲ್ಲಿ ಕರ್ನಾಟಕದ ಪ್ರಮುಖ ಕೃಷಿ ಬೆಳೆಗಳಲ್ಲಿನ ಗುರಿಗಳು ಹಾಗೂ ಸಾಧನೆಗಳು

ಘಟಕ: ವಿ: ವಿಸ್ತೀರ್ಣ ಲಕ್ಷ ಹೆಕ್ಟೇರುಗಳಲ್ಲಿ

ಉ: ಉತ್ಪಾದನೆ ಲಕ್ಷ ಟನ್ನುಗಳಲ್ಲಿ

| ಕ್ರ ಸಂ. | ಬೆಳೆಗಳು | | ಮುಂಗಾರು | | ಹಿಂಗಾರು:ಬೇಸಿಗೆ | | ಒಟ್ಟು | |
|---|---|---|---|---|---|---|---|---|
| | | | ಗುರಿ | ಸಾಧನೆ | ಗುರಿ | ಸಾಧನೆ | ಗುರಿ | ಸಾಧನೆ |
| 1 | 2 | | 3 | 4 | 5 | 6 | 7 | 8 |
| 1. | ಭತ್ತ | ವಿ | 9.66 | 10.14 | 1.84 | 2.91 | 11.50 | 13.05 |
| | | ಉ | 22.44 | 23.58 | 6.37 | 7.99 | 28.81 | 31.57 |
| 2. | ಜೋಳ | ವಿ | 6.30 | 4.84 | 14.25 | 16.77 | 20.55 | 21.61 |
| | | ಉ | 9.18 | 6.14 | 8.17 | 10.11 | 17.35 | 16.25 |
| 3. | ರಾಗಿ | ವಿ | 10.05 | 9.17 | 0.45 | 0.70 | 10.50 | 9.87 |
| | | ಉ | 15.30 | 13.05 | 0.76 | 1.17 | 16.06 | 14.22 |
| 4. | ಮುಸುಕಿನ ಜೋಳ | ವಿ | 2.62 | 3.00 | 0.58 | 0.47 | 3.20 | 3.47 |
| | | ಉ | 9.08 | 9.09 | 1.53 | 1.29 | 10.61 | 10.38 |

| 1 | 2 | | 3 | 4 | 5 | 6 | 7 | 8 |
|---|---|---|---|---|---|---|---|---|
| 5. | ಸಜ್ಜೆ | ವಿ | 3.50 | 2.94 | — | 0.01 | 3.50 | 2.95 |
| | | ಉ | 2.04 | 1.20 | — | 0.01 | 2.04 | 1.21 |
| 6. | ಗೋಧಿ | ವಿ | — | — | 1.37 | 2.38 | 1.37 | 2.38 |
| | | ಉ | — | — | 1.02 | 1.75 | 1.02 | 1.75 |
| 7. | ತೃಣ | ವಿ | 1.00 | 1.06 | — | — | 1.00 | 1.06 |
| | ಧಾನ್ಯಗಳು | ಉ | 0.61 | 0.50 | — | — | 0.61 | 0.50 |
| 8. | ಒಟ್ಟು | ವಿ | 33.13 | 31.15 | 18.49 | 23.24 | 51.62 | 54.39 |
| | ಧಾನ್ಯಗಳು | ಉ | 58.65 | 53.56 | 17.85 | 22.32 | 76.50 | 75.88 |
| 9. | ತೊಗರಿ | ವಿ | 4.00 | 3.05 | — | — | 4.00 | 3.05 |
| | | ಉ | 1.51 | 1.16 | — | — | 1.51 | 1.16 |
| 10. | ಕಡಲೆ | ವಿ | — | — | 2.50 | 4.37 | 2.50 | 4.37 |
| | | ಉ | — | — | 0.99 | 2.27 | 0.99 | 2.27 |
| 11. | ಇತರೆ | ವಿ | 6.55 | 6.28 | 1.95 | 3.08 | 8.50 | 9.36 |
| | ದ್ವಿದಳ ಧಾನ್ಯಗಳು | ಉ | 2.31 | 2.13 | 0.69 | 1.11 | 3.00 | 3.24 |

| 1 | 2 | | 3 | 4 | 5 | 6 | 7 | 8 |
|---|---|---|---|---|---|---|---|---|
| ಬಿ. | ಒಟ್ಟು ದ್ವಿದಳ ಧಾನ್ಯಗಳು | ವಿ | 10.55 | 9.33 | 4.45 | 7.45 | 15.00 | 16.78 |
| | | ಉ | 3.82 | 3.29 | 1.68 | 3.38 | 5.50 | 6.67 |
| ಸಿ. | ಒಟ್ಟು ಆಹಾರ ಧಾನ್ಯಗಳು | ವಿ | 43.68 | 40.48 | 22.94 | 30.69 | 66.62 | 71.17 |
| | | ಉ | 62.47 | 56.85 | 19.53 | 25.70 | 82.00 | 82.55 |
| 12. | ನೆಲಗಡಲೆ | ವಿ | 11.40 | 9.77 | 2.40 | 2.39 | 13.80 | 12.16 |
| | | ಉ | 7.85 | 6.81 | 3.79 | 3.28 | 11.64 | 10.09 |
| 13. | ಎಳ್ಳು | ವಿ | 1.40 | 1.10 | 0.10 | — | 1.50 | 1.10 |
| | | ಉ | 0.67 | 0.41 | 0.07 | — | 0.74 | 0.41 |
| 14. | ಸೂರ್ಯಕಾಂತಿ | ವಿ | 4.50 | 3.52 | 5.32 | 5.46 | 9.82 | 8.98 |
| | | ಉ | 2.24 | 1.55 | 2.50 | 2.13 | 4.74 | 3.68 |
| 15. | ಹರಳು | ವಿ | 0.34 | 0.23 | — | — | 0.34 | 0.23 |
| | | ಉ | 0.21 | 0.18 | — | — | 0.21 | 0.18 |
| 16. | ಹುಚ್ಚೆಳ್ಳು | ವಿ | 0.64 | 0.38 | — | — | 0.64 | 0.38 |
| | | ಉ | 0.12 | 0.07 | — | — | 0.12 | 0.07 |
| 17. | ಸೋಯಾಬೀನ್ | ವಿ | 0.40 | 0.47 | 0.25 | — | 0.65 | 0.42 |
| | | ಉ | 0.26 | 0.42 | 0.19 | — | 0.45 | 0.42 |

| 1 2 | | 3 | 4 | 5 | 6 | 7 | 8 |
|---|---|---|---|---|---|---|---|
| 18. ಕುಸುಬೆ | ವಿ | — | — | 1.78 | 2.58 | 1.78 | 2.58 |
| | ಉ | — | — | 0.95 | 1.43 | 0.95 | 1.43 |
| 19. ಲಿನಸೀಡ್ | ವಿ | — | — | 0.38 | 0.39 | 0.38 | 0.39 |
| | ಉ | — | — | 0.12 | 0.10 | 0.12 | 0.10 |
| 20. ಒಟ್ಟು ಎಣ್ಣೆಕಾಳು | ವಿ | 18.77 | 15.54 | 10.23 | 10.91 | 29.00 | 26.45 |
| | ಉ | 11.38 | 9.45 | 7.62 | 6.97 | 19.00 | 16.42 |
| 21. ಹತ್ತಿ● | ವಿ | | | | | 6.00 | 5.96 |
| | ಉ | | | | | 9.00 | 8.59 |
| 22. ಕಬ್ಬು | ವಿ | | | | | 2.15 | 2.30 |
| | ಉ | | | | | 215.00 | 196.65 |
| 23. ತಂಬಾಕು | ವಿ | | | | | 0.52 | 0.58 |
| | ಉ | | | | | 0.47 | 0.48 |

ಸೂಚನೆ:● ಹತ್ತಿ ಉತ್ಪಾದನೆಯು ಲಕ್ಷ ಬೇಲುಗಳಲ್ಲಿ (170 ಕಜಿ.ಹರಳ)

60೫-2

ಕೃಷಿ ಸಾಮಗ್ರಿಗಳ ಪೂರೈಕೆ ಮತ್ತು ಉಸ್ತುವಾರಿ ಕಾರ್ಯ ಕ್ರಮ:—

ಕೃಷಿ ಸಾಮಗ್ರಿಗಳ ಪೂರೈಕೆ, ಉಸ್ತುವಾರಿ ಮತ್ತು ಗುಣನಿಯಂತ್ರಣ ಕಾರ್ಯಕ್ರಮಗಳು ಇಲಾಖೆಯ ಪ್ರಮುಖ ಚಟುವಟಿಕೆಗಳಾಗಿದ್ದು, ಈ ಕಾರ್ಯವನ್ನು ಸರ್ಕಾರ ಮತ್ತು ಖಾಸಗಿ ಸಂಸ್ಥೆಗಳ ಸಹಯೋಗದೊಂದಿಗೆ ಗುಣಮಟ್ಟದ ಕೃಷಿ ಪರಿಕರಗಳಾದಂತಹ ಬೀಜ, ರಸಗೊಬ್ಬರ, ಸಸ್ಯ ಸಂರಕ್ಷಣಾ ರಾಸಾಯನಿಕಗಳ ಸರಬರಾಜನ್ನು ಮತ್ತು ಎಲ್ಲಾ ವರ್ಗಗಳ ರೈತ ಸಮುದಾಯಕ್ಕೆ ಬೇಕಾಗುವಷ್ಟು ಮತ್ತು ಅವರಿಗೆ ಸುಲಭ ವಾಗಿ ಸನಿಹದಲ್ಲಿ ದೊರೆಯುವಂತೆ ವ್ಯವಸ್ಥೆ ಮಾಡಲಾಗಿದೆ.

<u>ಬೀಜ</u>:—

ಇಲಾಖೆಯು ಕರ್ನಾಟಕ ರಾಜ್ಯ ಬೀಜ ನಿಗಮ, ರಾಷ್ಟ್ರೀಯ ಬೀಜ ನಿಗಮ, ಕರ್ನಾಟಕ ಎಣ್ಣೆಕಾಳು ಬೆಳೆಗಾರರ ಮಹಾಮಂಡಳಿ ಮತ್ತು ಖಾಸಗಿ ಸಂಸ್ಥೆಗಳ ಸಹಕಾರದೊಂದಿಗೆ ಗುಣಮಟ್ಟದ ಬಿತ್ತನೆ ಬೀಜಗಳ ಪೂರೈಕೆಯ ಜವಾಬ್ದಾರಿಯನ್ನು ಹೊತ್ತಿದೆ. ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆಯು ಗುಣಮಟ್ಟದ ಬಿತ್ತನೆ ಬೀಜಗಳ ಉತ್ಪಾದನೆಯ ಉಸ್ತುವಾರಿ ಯನ್ನು, ಬೀಜಗಳನ್ನು ಪ್ರಮಾಣೀಕರಿಸುವುದರ ಮುಖಾಂತರ ಮಾಡುತ್ತದೆ. ಇಲಾಖೆಯು ಬದಲಿ ಆಧಾರದ ಮೇಲೆ ಪ್ರತಿಶತ 8 — 10 ಏಕದಳ ಧಾನ್ಯಗಳು, 100 ರಷ್ಟು ಸಂಕರ ಮತ್ತು 2.5 ರಿಂದ 15 ರಷ್ಟು ಎಣ್ಣೆಕಾಳು ಮತ್ತು ಬೇಳೆಕಾಳುಗಳಿಗೆ ಸಂಬಂಧಿಸಿದಂತೆ ಪ್ರಮಾಣಿತ ಬಿತ್ತನೆ ಬೀಜಗಳನ್ನು ಪೂರೈಸಲು ಯೋಜಿಸಿದೆ. ಇಲಾಖೆಯು ಬಿತ್ತನೆ ಬೀಜಗಳ ವಾರ್ಷಿಕ ಬೇಡಿಕೆಯನ್ನು ಸಾಕಷ್ಟು ಮುಂಚಿತವಾಗಿ ಅಂದಾಜು ಮಾಡುವುದು ಮತ್ತು ಅದಕ್ಕನುಗುಣವಾಗಿ ಪ್ರಮಾಣೀಕರಿಸಿದ ಮತ್ತು ಗುಣ ಮಟ್ಟದ ಬಿತ್ತನೆ ಬೀಜಗಳನ್ನು ವ್ಯವಸ್ಥಿತವಾದ ಬೀಜ ಮಾರಾಟ

ಮಳಿಗೆಗಳ ಮೂಲಕ ವಿತರಿಸಲು ಏರ್ಪಾಡುಗಳನ್ನು ಮಾಡುವುದು. ಗುಣಮಟ್ಟದ ಬಿತ್ತನೆ ಬೀಜಗಳ ಪೂರೈಕೆಯ ಉಸ್ತುವಾರಿಯನ್ನು ವಿವಿಧ ಹಂತಗಳಲ್ಲಿ ಮಾಡಲಾಗುವುದು ಮತ್ತು ಬೀಜ ಅಧಿನಿಯಮ ಮತ್ತು ಬೀಜ ಕಾಯಿದೆಗಳಡಿಯಲ್ಲಿ ಗುಣ ನಿಯಂತ್ರಣವನ್ನು ಕಾಯ್ದುಕೊಳ್ಳಲಾಗುವುದು.

<u>ಇಲಾಖೆಯ ಕೃಷಿ ಕ್ಷೇತ್ರಗಳಲ್ಲಿ ಮೂಲ ಬೀಜಗಳ ಉತ್ಪಾದನೆ</u>:—

ಇಲಾಖೆಯಲ್ಲಿ 75 ಕೃಷಿ ಕ್ಷೇತ್ರಗಳಿದ್ದು, ಎಲ್ಲಾ 3 ಹಂಗಾಮುಗಳಲ್ಲಿ ಮೂಲ ಬೀಜಗಳ ಉತ್ಪಾದನೆಗೆ ಇಲಾಖೆಯು ವ್ಯವಸ್ಥೆ ಮಾಡುತ್ತದೆ. ತಳಿವರ್ಧಕ ಬೀಜಗಳನ್ನು ರಾಜ್ಯದ ಎರಡು ಕೃಷಿ ವಿಶ್ವವಿದ್ಯಾನಿಲಯಗಳಿಂದ ಪಡೆದು ಇಲಾಖೆಯ ಕೃಷಿ ಕ್ಷೇತ್ರಗಳಲ್ಲಿ ಅವುಗಳಿಂದ ಮೂಲ ಬೀಜಗಳನ್ನು ಉತ್ಪಾದಿಸಿ ಅವುಗಳನ್ನು ಪ್ರಮಾಣಿತ ಬೀಜಗಳಾಗಿ ದ್ವಿಗುಣಗೊಳಿಸಲು ಕರ್ನಾಟಕ ರಾಜ್ಯ ಬೀಜ ನಿಗಮಕ್ಕೆ ನೀಡಲಾಗುವುದು.

1994—95ರಲ್ಲಿ 7800 ಕ್ವಿಂಟಾಲ ಮೂಲ ಬೀಜಗಳನ್ನು ಉತ್ಪಾದಿಸುವುದಕ್ಕಾಗಿ, 1015 ಹೆಕ್ಟೇರುಗಳಲ್ಲಿ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗಿತ್ತು. ಇದಕ್ಕೆ ಬದಲಾಗಿ 1994—95ರಲ್ಲಿ 807.00 ಹೆಕ್ಟೇರುಗಳಲ್ಲಿ ಮೂಲ ಬೀಜಗಳ ಉತ್ಪಾದನೆ ಮಾಡಲಾಗಿದ್ದು, 4970 ಕ್ವಿಂಟಾಲಗಳಷ್ಟನ್ನು ಉತ್ಪಾದಿಸಲಾಗಿದೆ.

1995—96ನೇ ಸಾಲಿನಲ್ಲಿ 1020 ಹೆಕ್ಟೇರ ಪ್ರದೇಶದಲ್ಲಿ 7850 ಕ್ವಿಂಟಾಲಗಳಷ್ಟು ಮೂಲಬೀಜಗಳನ್ನು ಉತ್ಪಾದಿಸಲು ಕಾರ್ಯಕ್ರಮ ಹಮ್ಮಿಕೊಳ್ಳಲಾಗಿರುತ್ತದೆ.

ಈ ಕೃಷಿ ಕ್ಷೇತ್ರಗಳ ಕಾರ್ಯದಕ್ಷತೆಯನ್ನು ಸುಧಾರಿಸಲು ರಾಜ್ಯ ಯೋಜನೆಯಡಿಯಲ್ಲಿ 30.00 ಲಕ್ಷ

ರೂ.ಗಳನ್ನು ಹಾಗೂ ಇಲಾಖೆಯ ಅಧೀನದಲ್ಲಿರುವ 36 ಬೀಜೋತ್ಪಾದನಾ ಕೇಂದ್ರಗಳಿಗೆ ಯೋಜನೇತರ ಲೆಕ್ಕ ಶೀರ್ಷಿಕೆಯಡಿಯಲ್ಲಿ 132.25 ಲಕ್ಷ ರೂ.ಗಳನ್ನು, 1994–95ನೇ ವರ್ಷಕ್ಕೆ ಒದಗಿಸಲಾಗಿತ್ತು. ಇದರಡಿ ಮಾರ್ಚ್ ಅಂತ್ಯದ ವರೆಗೆ 122.80 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಗಿದೆ.

ಬೀಜ ವಿತರಣೆ:–

ರಾಜ್ಯಕ್ಕೆ 1994–95ನೇ ಮುಂಗಾರು ಹಂಗಾಮಿಗೆ 3,40,135 ಕ್ವಿಂಟಾಲು ಮತ್ತು ಹಿಂಗಾರು : ಬೇಸಿಗೆ ಹಂಗಾಮಿಗೆ 1,08,856 ಕ್ವಿಂಟಾಲು ಸೇರಿದಂತೆ ಒಟ್ಟು 4,48,991 ಕ್ವಿಂಟಾಲು ಪ್ರಮಾಣಿತ : ನಿಜಬಿತ್ತನೆ ಬೀಜಗಳು ಬೇಕಾಗಬಹುದೆಂದು ಅಂದಾಜು ಮಾಡಲಾಗಿತ್ತು. 1994–95ರ ಮುಂಗಾರು ಹಂಗಾಮಿಗೆ ನಿಗದಿಪಡಿಸಲಾಗಿದ್ದ 3,40,135 ಕ್ವಿಂಟಾಲುಗಳಿಗೆ ಪ್ರತಿಯಾಗಿ 3,52,005 ಕ್ವಿಂಟಾಲ ಪ್ರಮಾಣಿತ. ನಿಜಬಿತ್ತನೆ ಬೀಜಗಳನ್ನು ವಿತರಿಸಲಾಗಿದ್ದು, ಪ್ರಗತಿಯು ಪ್ರತಿಶತ 103.0 ರಷ್ಟಾಗಿರುತ್ತದೆ. ಇದಲ್ಲದೆ ಸಂಕರ ಹತ್ತಿ ಬೀಜಗಳ ಹೆಚ್ಚಿನ ಬೇಡಿಕೆಯನ್ನು ಬೀಜ ನಿಗಮಗಳ ಮೂಲಕ ಪೂರೈಸಲಾಗಿತ್ತು. ಹಿಂಗಾರು : ಬೇಸಿಗೆ ಹಂಗಾಮಿಗೆ 1,08,856 ಕ್ವಿಂಟಾಲುಗಳ ಬೇಡಿಕೆಗೆ ಪ್ರತಿಯಾಗಿ 1,09,744 ಕ್ವಿಂಟಾಲುಗಳ ಪ್ರಮಾಣಿತ : ನಿಜಬಿತ್ತನೆ ಬೀಜಗಳನ್ನು ವಿತರಿಸಲಾಗಿತ್ತು.

1994–95ರ ಬೀಜ ವಿತರಣಾ ಪ್ರಗತಿಯನ್ನು ಈ ಕೆಳಗೆ ನೀಡಲಾಗಿದೆ.

(ಪ್ರಮಾಣ: ಕ್ವಿಂಟಾಲುಗಳಲ್ಲಿ)

| ಕ್ರಮ ಸಂಖ್ಯೆ | ವಿವರಗಳು | ಪ್ರಮಾಣಿತ: ನಿಜಬಿತ್ತನೆ ಬೀಜಗಳ ಒಟ್ಟು ಬೇಡಿಕೆ | ಪ್ರಮಾಣಿತ: ನಿಜಬಿತ್ತನೆ ಬೀಜಗಳ ಒಟ್ಟು ವಿತರಣೆ |
|---|---|---|---|
| 1. | ಏಕದಳ ಧಾನ್ಯ | 2,07,075 | 2,41,460 |
| 2. | ಬೇಳೆಕಾಳು | 60,194 | 48,196 |
| 3. | ಎಣ್ಣೆಕಾಳು | 1,09,382 | 1,60,733 |
| 4. | ಹತ್ತಿ | 12,340 | 11,360 |
| | ಒಟ್ಟು .. | 4,48,991 | 4,61,749 |

1995–96ನೇ ಸಾಲಿಗೆ ಒಟ್ಟು 4,98,990 ಕ್ವಿಂಟಾಲು ಪ್ರಮಾಣಿತ ಬಿತ್ತನೆಬೀಜ ವಿತರಿಸಲು ಯೋಜಿಸಲಾಗಿದೆ.

ಬೀಜ ಪ್ರಯೋಗಾಲಯಗಳು:–

ಇಲಾಖೆಯ ಅಧೀನದಲ್ಲಿ ಎರಡು ಬೀಜ ಪ್ರಯೋಗಾಲಯಗಳಿದ್ದು, (ಹೆಬ್ಬಾಳ ಮತ್ತು ಧಾರವಾಡ) 1994–95ನೇ ಸಾಲಿನಲ್ಲಿ 32,500 ಬೀಜ ಮಾದರಿಗಳ ವಿಶ್ಲೇಷಣಾ ಗುರಿಗೆ ಪ್ರತಿಯಾಗಿ 32,536 ಮಾದರಿಗಳನ್ನು ವಿಶ್ಲೇಷಿಸಲಾಯಿತು. ವಿವರಗಳು ಈ ಕೆಳಗಿನಂತಿವೆ:–

| | ಗುರಿ | ಸಾಧನೆ |
|---|---|---|
| ಬೀಜ ಪ್ರಯೋಗಾಲಯ, ಹೆಬ್ಬಾಳ .. | 16500 | 23205 |
| –"– ಧಾರವಾಡ .. | 16000 | 9331 |
| ಒಟ್ಟು .. | 32500 | 32536 |

**1994–95ನೇ ಸಾಲಿನಲ್ಲಿ ಮಂಜೂರಾದ ಯೋಜನೆಗಳ ಮತ್ತು 1995–96ನೇ ಸಾಲಿಗಾಗಿ ಹಮ್ಮಿಕೊಂಡ ಯೋಜನೆಗಳ ವಿವರಗಳು:**

ಬೀಜ ಖರೀದಿ ಮತ್ತು ಮಾರಾಟಕ್ಕಾಗಿ '' ಬೀಜ ಸುತ್ತು ನಿಧಿ '' ಯೋಜನೆ:–

ಸರ್ಕಾರದ ಆದೇಶ ಸಂಖ್ಯೆ·ಕೃತೋಇ:185:ಕೃಯೋ: 93, ಬೆಂಗಳೂರು, ದಿನಾಂಕ: 3–3–1994ರ ಅಡಿಯಲ್ಲಿ ಈ ಯೋಜನೆಯು ಮಂಜೂರಾಗಿರುತ್ತದೆ. ರಾಜ್ಯದಲ್ಲಿನ ಜಿಲ್ಲೆಗಳಿಂದ ತುಮಕೂರು, ಬಿಜಾಪುರ, ಬಳ್ಳಾರಿ, ಧಾರವಾಡ, ಮೈಸೂರು, ಮಂಡ್ಯ, ಕೊಡಗು, ಗುಲ್ಬರ್ಗಾ, ಬೀದರ, ದಕ್ಷಿಣಕನ್ನಡ ಮತ್ತು ಹಾಸನ ಇವುಗಳ ಜಿಲ್ಲಾ ಪಂಚಾಯತ ಲೆಕ್ಕಕ್ಕೆ ರೂ.22.00 ಲಕ್ಷ ಅನುದಾನ ಜಮಾ ಆಗಿರುತ್ತದೆ. ಸದರಿ ಅನುದಾನವನ್ನು, ತ್ವರಿತವಾಗಿ ಬೇಕಾಗುವ ಬೀಜವನ್ನು ಖರೀದಿಸಿ, ಲಾಭವೂ, ನಷ್ಟವೂ ಇಲ್ಲದಂತೆ ರೈತರಿಗೆ ವಿತರಿಸಲಾಗುತ್ತಿದೆ. ಬಂದಂತಹ ಹಣವನ್ನು ತಿರುಗಿ ಬೀಜ ಸುತ್ತು ನಿಧಿಗೆ ಜಮಾ ಮಾಡಿ, ಅದನ್ನೇ ಮತ್ತೆ ಆವಶ್ಯಕತೆಗೆ ತಕ್ಕಂತೆ ಬಳಸಲಾಗುವುದು. ಈ ಯೋಜನೆಯು '' ಸುತ್ತು ನಿಧಿ '' ಮೂಲಕ ಸದಾಕಾಲ ಮುಂದುವರೆಯುವುದು.

ಇತರೆ 8 ಜಿಲ್ಲೆಗಳಿಗೆ ಬೀಜ ಸುತ್ತು ನಿಧಿಯನ್ನು ರಾಜ್ಯ ಸರ್ಕಾರವು ಇನ್ನೂ ಒದಗಿಸಿರುವುದಿಲ್ಲ.

ಇದಲ್ಲದೆ 1994–95ನೇ ಸಾಲಿಗಾಗಿ ಮತ್ತು ಮುಂಬರುವ ವರ್ಷಗಳಲ್ಲಿ ಸದರಿ ಯೋಜನೆಯನ್ನು ಬೆಂಗಳೂರು (ನಗರ) ಜಿಲ್ಲೆಗಾಗಿ ಅನುಷ್ಠಾನಗೊಳಿಸಲು ಸರ್ಕಾರದ ಆದೇಶ ಸಂಖ್ಯೆ· ಕೃತೋಇ:488: ಕೃಯೋ:94 ಬೆಂಗಳೂರು, ದಿನಾಂಕ: 20–1–1995ರಂತೆ 2.00 ಲಕ್ಷ ರೂ.ಗಳ ಅನುದಾನ ಬಿಡುಗಡೆ ಮಾಡಲಾಗಿದೆ.

1995–96ರಲ್ಲಿ ಎರಡು ಬೀಜ ಪ್ರಯೋಗಾಲಯಗಳಲ್ಲಿ 32,500 ಬೀಜ ಮಾದರಿಗಳನ್ನು ವಿಶ್ಲೇಷಿಸಲು ತಾತ್ಕಾಲಿಕ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

ಬೀಜ ಕಾಯಿದೆಯನ್ನು ಅನುಷ್ಠಾನಗೊಳಿಸುವಿಕೆ :–

ರೈತ ಸಮುದಾಯಕ್ಕೆ ವಿತರಣೆ ಮಾಡುವ ಗುಣಮಟ್ಟದ ಬೀಜಗಳ ಉಸ್ತುವಾರಿ ಮಾಡಲು ಇಲಾಖೆಯಲ್ಲಿ 680 ಬೀಜ ಪರಿವೀಕ್ಷಕರಿದ್ದಾರೆ. 1994–95ರ ಸಾಲಿನಲ್ಲಿ 33,000 ಬೀಜ ಮಾದರಿಗಳ ವಿಶ್ಲೇಷಣಾ ಗುರಿಗೆ ಪ್ರತಿಯಾಗಿ 16,503 ಸೇವಾ ಮಾದರಿಗಳು ಮತ್ತು 5,853 ಬೀಜ ಅಧಿನಿಯಮದ ಮಾದರಿಗಳೂ ಸೇರಿದಂತೆ ಒಟ್ಟು 22,356 ಬೀಜ ಮಾದರಿಗಳನ್ನು ಸಂಗ್ರಹಿಸಿ, ವಿಶ್ಲೇಷಣೆಗಾಗಿ ಪ್ರಯೋಗಾಲಯಕ್ಕೆ ಕಳುಹಿಸಲಾಯಿತು. ಇದರಲ್ಲಿ 2,977 ಸೇವಾ ಮತ್ತು 384 ಬೀಜ ಅಧಿನಿಯಮದ ಮಾದರಿಗಳೂ ಸೇರಿದಂತೆ ಒಟ್ಟು 3361 ಮಾದರಿಗಳು ಕಳಪೆಯೆಂದು ಕಂಡು ಬಂದಿದೆ.

ಸೇವಾ ಮಾದರಿಗಳಡಿಯಲ್ಲಿ ಕಳಪೆಯೆಂದು ಕಂಡು ಬಂದ ಸಂದರ್ಭಗಳಲ್ಲಿ ರೈತಬಾಂಧವರಿಗೆ ಸದರಿ ಬೀಜಗಳನ್ನು ಬಿತ್ತನೆಗೆ ಬಳಸಬಾರದೆಂದು ತಿಳುವಳಿಕೆಯನ್ನು ನೀಡಲಾಗಿದೆ. ಬೀಜ ಅಧಿನಿಯಮದ ಮಾದರಿಗಳಿಗೆ ಸಂಬಂಧಿಸಿದಂತೆ ಬೀಜ ಕಾಯಿದೆ ಮತ್ತು ನಿಯಮಗಳನುಸಾರ ಕ್ರಮ ಕೈಗೊಳ್ಳಲಾಗಿದೆ. ಜೊತೆಗೆ ಸಂಬಂಧಪಟ್ಟ ಬೀಜ ವಿತರಣಾ ಸಂಸ್ಥೆಗಳಿಗೆ ಮಾರಾಟ ನಿಲುಗಡೆ ಮತ್ತು ಎಚ್ಚರಿಕೆಯ ಸೂಚನೆಗಳನ್ನು ನೀಡಲಾಗಿದೆ. 1995–96ನೇ ಸಾಲಿನಲ್ಲಿ ಒಟ್ಟು 33,000 ಬೀಜ ಮಾದರಿಗಳನ್ನು ಗುಣಮಟ್ಟದ ಪರೀಕ್ಷೆಗಾಗಿ ಸಂಗ್ರಹಿಸಲು ತಾತ್ಕಾಲಿಕ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗಿದೆ.

ನೋಂದಾಯಿತ ಬೀಜ ಬೆಳೆಗಾರರ ಯೋಜನೆ:-

1994-95ನೇ ಸಾಲಿನಲ್ಲಿ ಸ್ವಕೀಯ ಪರಾಗಸ್ಪರ್ಶ ಬೆಳೆಗಳ ಬೀಜದ ಬೇಡಿಕೆಯನ್ನು ಪೂರೈಸಲು ನೋಂದಾಯಿತ ಬೀಜೋತ್ಪಾದಕರ ಮೂಲಕ ಉತ್ಪಾದನೆ ಕೈಗೊಂಡು ರೈತರಿಂದ – ರೈತರಿಗೆ ಸರಬರಾಜು ಮಾಡುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿರುತ್ತದೆ. ಸದರಿ ಯೋಜನೆಯನ್ನು ಈ ಸಲ ಪ್ರಾಯೋಗಿಕವಾಗಿ ಪ್ರಸಕ್ತ ಬೇಸಿಗೆ ಹಂಗಾಮಿನಲ್ಲಿ ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ರಾಗಿ ಬೆಳೆ ಬೀಜೋತ್ಪಾದನೆ ಹಾಗೂ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಬತ್ತದ ಬೆಳೆಯ ಬೀಜೋತ್ಪಾದನೆ ಕೈಗೊಳ್ಳಲಾಗಿದೆ. ಈ ಯೋಜನೆಯಲ್ಲಿ ವಿಸ್ತರಣಾ ಸಿಬ್ಬಂದಿ ಮತ್ತು ರೈತರಿಗೆ ತರಬೇತಿ ಹಾಗೂ ಶೇ.50ರ ರಿಯಾಯಿತಿಯಲ್ಲಿ ಮೂಲ ಬೀಜ ಹಂತ-1 ಬೀಜ ಸರಬರಾಜು ಮಾಡಲಾಗುವುದು. ಈ ಯೋಜನೆಯನ್ನು ಸರ್ಕಾರವು ತನ್ನ ಆದೇಶ ಸಂಖ್ಯೆ.ಎಹೆಚ್‌ಡಿ:184:ಎಎಂಎಸ್:93 ಬೆಂಗಳೂರು, ದಿನಾಂಕ: 29-10-1994ರ ಅಡಿಯಲ್ಲಿ ಮಂಜೂರು ಮಾಡಿದೆ. ಸದರಿ ಯೋಜನೆಗಾಗಿ ರೂ.62,627-00ಗಳ ಅನುದಾನವನ್ನು ಬಿಡುಗಡೆ ಮಾಡಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ.

ಬೀಜ ಅಪತ್ ನಿಧಿ ಯೋಜನೆ (ಕರ್ನಾಟಕ ರಾಜ್ಯ ಬೀಜ ನಿಗಮಕ್ಕಾಗಿ):-

1994-95ನೇ ಸಾಲಿನಲ್ಲಿ ಉತ್ಪಾದಿಸಿದ ಪ್ರಮಾಣಿಕೃತ ಬೀಜ ಉಪಯೋಗವಾಗದೇ ಉಳಿಕೆಯಾಗುವ ಸಂದರ್ಭದಲ್ಲಿ ಬೀಜ ಬೆಲೆ ಮತ್ತು ವಾಸ್ತವಿಕ ಕಾಳು ಬೆಲೆಗಳಲ್ಲಿನ ವ್ಯತ್ಯಾಸವನ್ನು ಕರ್ನಾಟಕ ರಾಜ್ಯ ಬೀಜ ನಿಗಮಕ್ಕೆ ಸಹಾಯಧನದ

ಯಾಪದಲ್ಲಿ ಒದಗಿಸಲಾಗಿದೆ. ಈ ಯೋಜನೆಯನ್ನು ಮುಂಬರುವ ವರ್ಷಗಳಲ್ಲಿಯೂ ಸಹ ಮುಂದುವರಿಸಬಹುದಾಗಿದೆ.

ಗಂಗಾವತಿ ಮತ್ತು ದಾವಣಗೆರೆಯಲ್ಲಿ ಹೊಸದಾಗಿ ಬೀಜ ಪರೀಕ್ಷಾ ಪ್ರಯೋಗಾಲಯಗಳನ್ನು ಸ್ಥಾಪಿಸುವುದರ ಬಗ್ಗೆ:-

ಗಂಗಾವತಿ ಮತ್ತು ದಾವಣಗೆರೆಗಳಲ್ಲಿ ಹೊಸದಾಗಿ ಬೀಜ ಪರೀಕ್ಷಾ ಪ್ರಯೋಗಾಲಯಗಳನ್ನು ಸ್ಥಾಪಿಸಲು ಸರ್ಕಾರವು ತನ್ನ ಆದೇಶದ ಸಂಖ್ಯೆ.ಎಹೆಚ್‌ಡಿ.74.ಎಎಫ್‌ಟಿ:92 ದಿನಾಂಕ: 19-3-94ರಲ್ಲಿ 50.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಿದೆ.

ರಸಗೊಬ್ಬರಗಳು:-

ಕೃಷಿಗೆ ರಸಗೊಬ್ಬರವು ಅತಿ ಮಹತ್ವದ ಹಾಗೂ ದುಬಾರಿ ಕೃಷಿ ಸಾಮಗ್ರಿಯಾಗಿದ್ದು, ಕೃಷಿ ಉತ್ಪಾದನೆಯು ಇದರ ಬಳಕೆಯ ಮೇಲೆ ಬಹುತೇಕ ಅವಲಂಬಿಸಿರುತ್ತದೆ. ಕೃಷಿ ಇಲಾಖೆಯ ಪ್ರಮುಖ ಹೊಣೆಗಾರಿಕೆಯು ರಾಜ್ಯದಲ್ಲಿ ರಸಗೊಬ್ಬರಗಳ ಪೂರೈಕೆ ಮತ್ತು ವಿತರಣಾ ವ್ಯವಸ್ಥೆಗಳನ್ನು ನೋಡುವುದಾಗಿದೆ. ವಿಸ್ತರಣಾ ಪ್ರಯತ್ನಗಳು ಮತ್ತು ಹೆಚ್ಚಿದ ನೀರಾವರಿ ಸೌಲಭ್ಯಗಳಿಂದಾಗಿ ರಾಜ್ಯದಲ್ಲಿ ರಸಗೊಬ್ಬರಗಳ ಬಳಕೆಯು ತೀವ್ರವಾಗಿ ಹೆಚ್ಚುತ್ತಿದೆ. ಸಧ್ಯದಲ್ಲಿ ಒಣಭೂಮಿ ಪ್ರದೇಶಗಳಲ್ಲಿ ರಸಗೊಬ್ಬರಗಳ ಬಳಕೆಯು ಅತ್ಯಂತ ಸೀಮಿತ ಪ್ರಮಾಣದಲ್ಲಿದ್ದು, ಒಣಭೂಮಿ ಬೇಸಾಯದ ಅಭಿವೃದ್ಧಿ ದಿಸೆಯಲ್ಲಿ ಇಲಾಖೆಯು ರಸಗೊಬ್ಬರಗಳ ಅಧಿಕ ಬಳಕೆಗೆ ಅನೇಕ ಕಾರ್ಯಕ್ರಮಗಳನ್ನು ತನ್ನ ವಿಸ್ತರಣಾ ಸಿಬ್ಬಂದಿಯ ಮೂಲಕ ಅಳವಡಿಸಿಕೊಂಡಿದೆ.

1994–95ರ ವರ್ಷಕ್ಕೆ ನಿಗದಿಪಡಿಸಿರುವ 8.40 ಲಕ್ಷ ಟನ್ನುಗಳ ಗುರಿಗೆ ಪ್ರತಿಯಾಗಿ 8.16 ಲಕ್ಷ ಟನ್ನು ರಸಗೊಬ್ಬರಗಳ ಬಳಕೆಯಾಗಿದೆ. 1993–94ರಲ್ಲಿ 8.15 ಲಕ್ಷ ಟನ್ನುಗಳ ಬಳಕೆಯಾಗಿತ್ತು. 1994–95ರಲ್ಲಿ ಒಟ್ಟು 11575 ಮಾರಾಟ ಕೇಂದ್ರಗಳು ರಾಜ್ಯದ ವಿವಿಧ ಭಾಗಗಳಲ್ಲಿ ಕಾರ್ಯ ಪ್ರವೃತ್ತವಾಗಿದೆ. 1995–96ರಲ್ಲಿ 8.80 ಲಕ್ಷ ಟನ್ನುಗಳಷ್ಟು ರಸಗೊಬ್ಬರಗಳನ್ನು ವಿತರಿಸುವ ಗುರಿಯನ್ನು ಹೊಂದಲಾಗಿದೆ.

ಕೇಂದ್ರ ಸರ್ಕಾರದ ದಿನಾಂಕ: 25–8–1992ರ ಹೊಸ ಬೆಲೆ ನೀತಿಯಿಂದಾಗಿ ರಾಜ್ಯದಲ್ಲಿ ರಂಜಕ, ಪೊಟ್ಯಾಷ್ ಮತ್ತು ಸಂಯುಕ್ತ ರಸಗೊಬ್ಬರಗಳ ಬೆಲೆ ಬಹಳ ಹೆಚ್ಚಳವಾಗಿದ್ದು, ರಾಜ್ಯದಲ್ಲಿ ರಸಗೊಬ್ಬರಗಳ ಬಳಕೆ ಕಡಿಮೆಯಾಗಿದೆ. 1994–95ರಲ್ಲಿ ರಸಗೊಬ್ಬರಗಳ ಒಟ್ಟಾರೆ ಬಳಕೆಯಲ್ಲಿ ಸುಮಾರು ಶೇ.5 – 10ರಷ್ಟು ಕಡಿಮೆಯಾಗುವ ಸಂಭವವಿದೆ. ಆದರೆ ರಂಜಕ ಮತ್ತು ಪೊಟ್ಯಾಷ್ ರಸಗೊಬ್ಬರಗಳ ಬಳಕೆಯಲ್ಲಿ ಸುಮಾರು ಶೇ.15ರಿಂದ 20ರಷ್ಟು ಕಡಿಮೆಯಾಗುವ ಸಂಭವವಿದ್ದು, ಸಾರಜನಕ, ರಂಜಕ ಮತ್ತು ಪೊಟ್ಯಾಷ್ ರಸಗೊಬ್ಬರಗಳ ಬಳಕೆಯಲ್ಲಿ ಅಸಮತೋಲನ ಉಂಟಾಗಿರುತ್ತದೆ. ರಂಜಕ ಹಾಗೂ ಪೊಟ್ಯಾಷ್ ಬಳಕೆಯಲ್ಲಿ ಕ್ರಮವಾಗಿ ಶೇ.26 ಹಾಗೂ 30ರಷ್ಟು ಕಡಿಮೆಯಾಗಿದ್ದು, ಸಾರಜನಕ ಬಳಕೆ ಶೇ.6 ರಷ್ಟು ಅಧಿಕಗೊಂಡಿದೆ.

ಕೇಂದ್ರ ಸರ್ಕಾರದ ಹೊಸ ಬೆಲೆ ನೀತಿಯಿಂದಾಗಿ ಉಂಟಾಗಿರುವ ಬೆಲೆ ಹೆಚ್ಚಳದ ಹೊರೆಯನ್ನು ತಗ್ಗಿಸಲು 1992–93 ಹಾಗೂ 1993–94ರಲ್ಲಿ ಜಾರಿಗೊಳಿಸಲಾಗಿದ್ದ ರಿಯಾಯಿತಿ ಬೆಲೆ ಯೋಜನೆಯನ್ನು 1994–95ನೇ ಸಾಲಿನಲ್ಲಿಯೂ ಮುಂದುವರಿಸಲಾಗಿದೆ. ಈ ಯೋಜನೆಯಡಿ 7.06 ಲಕ್ಷ ಟನ್ನುಗಳಷ್ಟು ರಸಗೊಬ್ಬರವನ್ನು 49.92 ಕೋಟಿ

ಯಾಗಳ ರಿಯಾಯಿತಿ ಮೊತ್ತದಲ್ಲಿ ವಿತರಿಸಲಾಗಿದೆ.

1956–57 ಹಾಗೂ ಕಳೆದ ಮೂರು ವರ್ಷಗಳಲ್ಲಿ ಳಕೆಯಾದ ರಸಗೊಬ್ಬರಗಳ ಪ್ರಮಾಣವು ಈ ಕೆಳಗಿನಂತಿದೆ:–

ರಸಗೊಬ್ಬರಗಳ ಬಳಕೆ (ಲಕ್ಷ ಟನ್ನುಗಳಷ್ಟು)

| ವರ್ಷ | ಸಾರಜನಕ | ರಂಜಕ | ಪೊಟ್ಯಾಷ | ಒಟ್ಟು |
|---|---|---|---|---|
| 956–57 | 0·04 | – | – | 0·04 |
| 991–92 | 4·47 | 2·92 | 1·66 | 9·05 |
| 992–93 | 4·43 | 2·55 | 1·23 | 8·11 |
| 993–94 | 4·73 | 2·16 | 1·16 | 8·05 |

ಸಗೊಬ್ಬರ ಗುಣನಿಯಂತ್ರಣ:–

ರಸಗೊಬ್ಬರ ಗುಣನಿಯಂತ್ರಣ ಕಾಯ್ದೆಯಡಿಯಲ್ಲಿ ಡಗಿಸಿರುವ ಕಟ್ಟುನಿಟ್ಟಿನ ಕ್ರಮಗಳ ಅನುಷ್ಠಾನದಿಂದ ರಸ ಗೊಬ್ಬರಗಳ ಗುಣಮಟ್ಟವನ್ನು ಕಾಯ್ದುಕೊಳ್ಳಲಾಗುತ್ತಿದೆ. ದಕ್ಕೋಸ್ಕರ 4800 ಮಾದರಿಗಳ ಸಂಗ್ರಹಣೆ ಗುರಿಗೆ ರ್ಯಾಯವಾಗಿ 4835 ಮಾದರಿಗಳನ್ನು ವಿಶ್ಲೇಷಿಸಲಾಗಿದೆ. ಸಗೊಬ್ಬರ ಪರಿವೀಕ್ಷಕರು ರಸಗೊಬ್ಬರ ನಿಯಂತ್ರಣ ಕಾಯ್ದೆ 985ರ ಮೇರೆಗೆ ಕಡಿಮೆ ಗುಣಮಟ್ಟದ 424 ಮಾದರಿಗಳ ಬಗ್ಗೆ ಮ ಜರುಗಿಸಿರುತ್ತಾರೆ. ರಾಜ್ಯದಲ್ಲಿ 472 ಕಂದಾಯ ಮತ್ತು ಜಿಲ್ಲಾ ಪಂಚಾಯತಿಗಳ ಅಧಿಕಾರಿಗಳನ್ನೊಳಗೊಂಡು ಟ್ಟು 938 ರಸಗೊಬ್ಬರ ಪರಿವೀಕ್ಷಕರಿದ್ದಾರೆ.

1995–96ನೇ ಸಾಲಿಗೆ ಧಾರವಾಡ ಮತ್ತು ಬೆಂಗಳೂರಿ ನಲ್ಲಿರುವ ರಸಗೊಬ್ಬರ ನಿಯಂತ್ರಣ ಪ್ರಯೋಗಾಲಯಗಳಲ್ಲಿ

4800 ಮಾದರಿಗಳನ್ನು ವಿಶ್ಲೇಷಿಸಲು ಯೋಜಿಸಲಾಗಿದೆ. ಗಂಗಾವತಿಯಲ್ಲಿ ಮತ್ತೊಂದು ರಸಗೊಬ್ಬರ ಪ್ರಯೋಗಾಲಯವನ್ನು ಸ್ಥಾಪಿಸಲಿದ್ದು, ಪ್ರತಿ ವರ್ಷ 2500 ರಸಗೊಬ್ಬರ ಮಾದರಿಗಳನ್ನು ವಿಶ್ಲೇಷಿಸುವ ಸಾಮರ್ಥ್ಯವಿರುತ್ತದೆ.

ಸಸ್ಯ ಸಂರಕ್ಷಣೆ:—

ಇಲಾಖೆಯು ವಿವಿಧ ಕಾರ್ಯಕ್ರಮಗಳಡಿಯಲ್ಲಿ ರಾಜ್ಯದ ಸುಮಾರು 50 ಲಕ್ಷ ಹೆಕ್ಟೇರುಗಳ ವಿಸ್ತೀರ್ಣವು ಸಮಗ್ರ ಸಸ್ಯ ಸಂರಕ್ಷಣೆ ಕ್ರಮಗಳಿಗೆ ಒಳಪಡುತ್ತದೆ. ಅವಶ್ಯಕ ಕೀಟನಾಶಕಗಳನ್ನು ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ, ಕರ್ನಾಟಕ ಕೃಷಿ ಕೈಗಾರಿಕಾ ನಿಗಮ ಮತ್ತು ಖಾಸಗಿಯವರ ಮುಖಾಂತರ ಪೂರೈಸಲಾಗುತ್ತದೆ.

1994—95ನೇ ಸಾಲಿನಲ್ಲಿ ವ್ಯಾಪಕ ಸಸ್ಯ ಸಂರಕ್ಷಣೆ ಯೋಜನೆಯಡಿಯಲ್ಲಿ ವಿವಿಧ ಸಸ್ಯ ಸಂರಕ್ಷಣೆ ಕ್ರಮಗಳಿಗೆ ಒಳಪಡಿಸಲು ನಿಗದಿಪಡಿಸಲಾಗಿದ್ದ 64.0 ಲಕ್ಷ ಹೆಕ್ಟೇರುಗಳಿಗೆ ಪ್ರತಿಯಾಗಿ 58.20 ಲಕ್ಷ ಹೆಕ್ಟೇರು ಪ್ರದೇಶವನ್ನು 3705 ಮೆಟ್ರಿಕ್ ಟನ್ನು (ತಾಂತ್ರಿಕ ಶ್ರೇಣಿ) ಪೀಡೆನಾಶಕಗಳನ್ನು ಬಳಸಿಕೊಂಡು ಉಪಚರಿಸಲಾಗಿದೆ.

ಪೀಡೆನಾಶಕಗಳ ಪೂರೈಕೆ ಉಸ್ತುವಾರಿ:—

ಅಗತ್ಯವಿರುವ ಪೀಡೆನಾಶಕಗಳನ್ನು ಕರ್ನಾಟಕ ಕೃಷಿ ಕೈಗಾರಿಕಾ ನಿಗಮ, ಕರ್ನಾಟಕ ರಾಜ್ಯ ಸಹಕಾರಿ ಮಹಾಮಂಡಳಿ ಮತ್ತು ಖಾಸಗಿಯವರಿಂದ ತೆರೆಯಲ್ಪಟ್ಟಿರುವ ಮಾರಾಟ ಕೇಂದ್ರಗಳ ಜಾಲದ ಮುಖಾಂತರ ಪೂರೈಸಿಕೊಳ್ಳಲಾಗುತ್ತದೆ.

ರಾಜ್ಯದಲ್ಲಿನ 6277 ಮಾರಾಟ ಮಳಿಗೆಗಳು ರಾಜ್ಯಾದ್ಯ

...ಪಿಸಿದ್ದು, ಪೀಡೆನಾಶಕಗಳ ಪೂರೈಕೆ ಸಮರ್ಪಕವಾಗಿತ್ತು.

1994–95ನೇ ಸಾಲಿನ ಯೋಜಿಸಿರುವ ಎಲ್ಲಾ ...ಯೋಜನೆಗಳನ್ನು 1995–96ರ ಸಾಲಿಗೆ ಮುಂದುವರಿಸಲಾಗಿದೆ.

...ಸ್ಯ ನೈರ್ಮಲ್ಯ ಸಮರ್ಥನಾ ಪತ್ರಗಳನ್ನು ನೀಡುವುದು:–

ಕಾಫಿ, ತರಕಾರಿ, ಅಲಂಕಾರಿಕಾ ಮತ್ತು ಹಣ್ಣಿನ ಸಸ್ಯ ...ಳನ್ನು ಪರಿಶೀಲಿಸಿ, 1995ರ ಮಾರ್ಚ್ ಅಂತ್ಯದ ವರೆಗೆ 891 ...ಮರ್ಥನಾ ಪತ್ರಗಳನ್ನು ರಫ್ತುದಾರರಿಗೆ ನೀಡಿದ್ದು, 3,29,809 ...ರೂ.ಗಳನ್ನು ಸರ್ಕಾರಕ್ಕೆ ಪಾವತಿ ಮಾಡಲಾಗಿದೆ.

...ಟನಾಶಕಗಳ ಗುಣನಿಯಂತ್ರಣ:–

ಪ್ರಸ್ತುತ ಬಳ್ಳಾರಿ ಮತ್ತು ಬೆಂಗಳೂರುಗಳಲ್ಲಿರುವ ...ಟನಾಶಕಗಳ ಪ್ರಯೋಗಾಲಯಗಳು ಗುಣನಿಯಂತ್ರಣಕ್ಕಾಗಿ ...ಟನಾಶಕ ಮಾದರಿಗಳನ್ನು ವಿಶ್ಲೇಷಿಸುತ್ತವೆ.

1994–95ನೇ ಸಾಲಿನಲ್ಲಿ 2400 ಮಾದರಿಗಳಿಗೆ ಪ್ರತಿ ...ಯಾಗಿ ಮಾರ್ಚ್ 95ರ ಅಂತ್ಯದ ವರೆಗೆ 2284 ಮಾದರಿಗಳನ್ನು ...ಡು ಪ್ರಯೋಗಾಲಯಗಳಲ್ಲಿ ಸ್ವೀಕರಿಸಲಾಗಿದ್ದು, ಇಲ್ಲಿಯ ...ರೆಗೆ 2146 ಮಾದರಿಗಳನ್ನು ವಿಶ್ಲೇಷಿಸಿ, 120 ಮಾದರಿಗಳು ...ಳಪೆ ಗುಣಮಟ್ಟದವುಗಳೆಂದು ಗುರ್ತಿಸಲಾಗಿದೆ.

ಕೀಟನಾಶಕ ಕಾಯ್ದೆ 1968ರ ಪ್ರಕಾರ ಇಂತಹ ಕಳಪೆ ...ಣಮಟ್ಟದ ಕೀಟನಾಶಕಗಳ ವಿರುದ್ಧ ಮೊಕದ್ದಮೆಗಳ ದಾಖಲೆ, ...ಚ್ಚರಿಕೆ ಮತ್ತು ಮಾರಾಟ ಸ್ಥಗಿತ ಸೂಚನೆಗಳು ಮುಂತಾದ ...ಮಗಳನ್ನು ಜಾರಿಮಾಡಲಾಗಿದೆ.

1994–95ನೇ ಸಾಲಿಗೆ ಪ್ರತಿ ಮಾಹೆಗೆ 100 ಮಾದರಿ ...ಯಂತೆ ಪ್ರತಿ ಪ್ರಯೋಗಾಲಯಕ್ಕೆ 1200 ಮಾದರಿಗಳಂತೆ

2400 ಮಾದರಿಗಳನ್ನು ವಿಶ್ಲೇಷಿಸುವ ಕಾರ್ಯಕ್ರಮವಿರುತ್ತ

<u>ಪರತಂತ್ರ ಜೀವಿ ಪ್ರಯೋಗಾಲಯಗಳು</u>:—

ಕಬ್ಬಿನ ಸುಳಿ ಕೊರೆಯುವ ಕೀಟವನ್ನು ಜೈವಿಕವಾಗಿ ನಿಯಂತ್ರಿಸಲು ಮಂಡ್ಯ, ಬೈಲಹೊಂಗಲ ಮತ್ತು ಗಂಗಾವತಿ ಯಲ್ಲಿ ತಲಾ ಒಂದರಂತೆ ಮೂರು ಪ್ರಯೋಗಾಲಯಗಳಿಂದ 5500 ಹೆಕ್ಟೇರ ಪ್ರದೇಶಕ್ಕೆ ಬೇಕಾಗುವ ಪರತಂತ್ರ ಜೀವಿಯ ಉತ್ಪಾದನೆ ಮತ್ತು ಬಿಡುಗಡೆ ಮಾಡಬೇಕಿದ್ದು, 3972 ಹೆಕ್ಟೇರ ಪ್ರದೇಶದಲ್ಲಿ ಈ ಪರತಂತ್ರ ಜೀವಿಯನ್ನು ಬಿಡುಗಡೆ ಮಾಡಲಾಗಿತ್ತು. ಹಾಲಿ ಉತ್ಪಾದನೆಯು ರೈತರಿಗೆ ಅಗತ್ಯಕ್ಕೆ ತಕ್ಕಂತೆ ಪೂರೈಸಲು ಸಾಧ್ಯವಾಗುತ್ತಿಲ್ಲ. ಅದಕ್ಕಾಗಿ ಈ ಪ್ರಯೋಗಶಾಲೆಗಳನ್ನು ಬಲಪಡಿಸುವ ಉದ್ದೇಶ ಕ್ಕಾಗಿ ರೂ.50 ಲಕ್ಷಗಳನ್ನು ಒದಗಿಸಲಾಗಿದೆ. ಅಲ್ಲದೆ ಗುಲಬರ್ಗಾದಲ್ಲೂ ಹೊಸದಾಗಿ ಪರತಂತ್ರ ಜೀವಿ ಪ್ರಯೋಗ ಶಾಲೆಯನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ.

<u>ಸಮಗ್ರ ಪೀಡೆ ನಿರ್ವಹಣೆ ಪ್ರಾತ್ಯಕ್ಷಿಕೆ ಹಾಗೂ ತರಬೇತಿಯ ಹೊಸ ಪದ್ಧತಿ</u>:—

ಸಮಗ್ರ ಪೀಡೆ ನಿರ್ವಹಣೆ ಪ್ರಾತ್ಯಕ್ಷಿಕೆ ಹಾಗೂ ತರಬೇತಿ ಹೊಸ ರೀತಿಯ ಕಾರ್ಯಕ್ರಮವನ್ನು ರಾಜ್ಯದಲ್ಲಿ 1994—9 ಸಾಲಿನಲ್ಲಿ ಪ್ರಾರಂಭಿಸಲಾಯಿತು. ಈ ಹಂಗಾಮಿನಲ್ಲಿ ರೈತರಿ ಮತ್ತು ವಿಸ್ತರಣಾ ಸಿಬ್ಬಂದಿಗೆ ದೀರ್ಘವಾದ (ಸತತವಾಗಿ 10 ವಾ ಗಳು) ತೀವ್ರ ಕ್ಷೇತ್ರ ತರಬೇತಿಯನ್ನು ನೀಡಲಾಯಿತು. ಈ ಪ್ರಾತ್ಯಕ್ಷಿಕೆ ಕ್ಷೇತ್ರ ಶಾಲೆಯನ್ನು ಗೊತ್ತುಪಡಿಸಿದ '' ಸಮಗ್ರ ಪೀಡೆ ನಿರ್ವಹಣೆಯ ರೈತರ ಕ್ಷೇತ್ರ ಶಾಲೆ '' ಎಂದು ಕರೆಯ ಲಾಗಿದೆ. ಸದರಿ ಹಂಗಾಮಿನಲ್ಲಿ ವಾರಕ್ಕೊಮ್ಮೆ ಕ್ರಮವಾಗಿ ಭೇಟಿ ನೀಡಿ ಕ್ಷೇತ್ರ ಸ್ಥಿತಿಯನ್ನು ಪಡೆಯುವ ಅಭ್ಯಾಸವನ್ನು

ರೈತರು ಮತ್ತು ವಿಸ್ತರಣಾ ಸಿಬ್ಬಂದಿಯನ್ನು ಪ್ರೇರೇಪಿಸುವುದೇ ಈ ದೀರ್ಘ ತರಬೇತಿಯ ಧ್ಯೇಯವಾಗಿರುತ್ತದೆ.

ಈ ಮೇಲಿನ ತತ್ವವನ್ನು ಜಾರಿಗೊಳಿಸಿ 1994–95ನೇ ಸಾಲಿನಲ್ಲಿ 72 ಸಮಗ್ರ ಪೀಡೆ ನಿರ್ವಹಣೆ ಪ್ರಾತ್ಯಕ್ಷಿಕೆ ಹಾಗೂ ತರಬೇತಿ ಕಾರ್ಯಕ್ರಮವನ್ನು ಏರ್ಪಡಿಸಲಾಗಿದೆ. ಇವುಗಳಲ್ಲಿ ಭತ್ತದಲ್ಲಿ 44 (ಪ್ರತಿಯೊಂದು 40 ಹೆಕ್ಟೇರು), 11 ಜಿಲ್ಲೆಗಳಲ್ಲಿ (ಗೊಂಚಲು ತಾಲ್ಲೂಕುಗಳಲ್ಲಿ), ಹತ್ತಿಯಲ್ಲಿ 20 (ಪ್ರತಿಯೊಂದು 10 ಹೆಕ್ಟೇರು) 5 ಜಿಲ್ಲೆಗಳಲ್ಲಿ ಮತ್ತು ದ್ವಿದಳಧಾನ್ಯದಲ್ಲಿ 8 (ಪ್ರತಿಯೊಂದು 10 ಹೆಕ್ಟೇರು) 2 ಜಿಲ್ಲೆಗಳಲ್ಲಿ. ಇದರಡಿಯಲ್ಲಿ ಕೇಂದ್ರೀಯ ಸಮಗ್ರ ಪೀಡೆ ನಿರ್ವಹಣಾ ಕೇಂದ್ರದ ಸಿಬ್ಬಂದಿ, ಕೃಷಿ ವಿಶ್ವವಿದ್ಯಾನಿಲಯದ ವಿಜ್ಞಾನಿಗಳು ಮತ್ತು ರಾಜ್ಯ ಕೃಷಿ ಇಲಾಖೆಯ ಕೌಶಲ್ಯ ತರಬೇತುದಾರರು, ಒಟ್ಟು 2160 ರೈತರು ಮತ್ತು 360 ವಿಸ್ತರಣಾ ಸಿಬ್ಬಂದಿಗೆ ತರಬೇತಿಯನ್ನು ನೀಡಿರುತ್ತಾರೆ.

ಈ ಮೇಲಿನ ಪ್ರಾತ್ಯಕ್ಷಿಕೆಯನ್ನು ಏರ್ಪಡಿಸಲು, ಭಾರತ ಸರ್ಕಾರವು ನೀಡಿದ 6,49,800 ರೂ.ಗಳ ಆರ್ಥಿಕ ಸಹಾಯಧನವನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳಲಾಗಿದೆ.

ಇದಲ್ಲದೆ ಕೇಂದ್ರ ಪುರಸ್ಕೃತ ಒತ್ತು ಕಾರ್ಯಕ್ರಮಗಳಾದ ತೀವ್ರ ಹತ್ತಿ ಅಭಿವೃದ್ಧಿ ಯೋಜನೆ, ಸಮಗ್ರ ಒರಟು ಏಕದಳ ಧಾನ್ಯ ಅಭಿವೃದ್ಧಿ ಯೋಜನೆ, ರಾಷ್ಟ್ರೀಯ ದ್ವಿದಳ ಧಾನ್ಯ ಅಭಿವೃದ್ಧಿ ಯೋಜನೆ ಮತ್ತು ಎಣ್ಣೆಕಾಳು ಅಭಿವೃದ್ಧಿ ಯೋಜನೆಯಡಿಯಲ್ಲಿ ಇದೇ ರೀತಿಯ ಪ್ರಾತ್ಯಕ್ಷಿಕೆ ಹಾಗೂ ತರಬೇತಿ ಕಾರ್ಯಕ್ರಮಗಳನ್ನು ಈ ಕೆಳಕಂಡಂತೆ ಏರ್ಪಡಿಸಲಾಗಿದೆ.

ತೀವ್ರ ಹತ್ತಿ ಅಭಿವೃದ್ಧಿ ಯೋಜನೆಯಡಿಯಲ್ಲಿ 8 ಜಿಲ್ಲೆಗಳಲ್ಲಿ 240 ರೈತರು ಮತ್ತು 40 ವಿಸ್ತರಣಾ ಸಿಬ್ಬಂದಿ

ರವರನ್ನು ತರಬೇತಿಗೊಳಿಸಿ, ಹತ್ತಿ ಬೆಳೆಯಲ್ಲಿ 8 ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಲಾಗಿದೆ. ಸಮಗ್ರ ಒರಟು ಏಕದಳಧಾನ್ಯ ಅಭಿವೃದ್ಧಿ ಯೋಜನೆಯಡಿಯಲ್ಲಿ 5 ಜಿಲ್ಲೆಗಳಲ್ಲಿ 150 ರೈತರು ಮತ್ತು 20 ವಿಸ್ತರಣಾ ಸಿಬ್ಬಂದಿಯನ್ನು ತರಬೇತಿಗೊಳಿಸಿ, ಬತ್ತದ ಬೆಳೆಯಲ್ಲಿ 20 ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಲಾಗಿದೆ.

ರಾಷ್ಟ್ರೀಯ ದ್ವಿದಳಧಾನ್ಯ ಅಭಿವೃದ್ಧಿ ಯೋಜನೆಯಡಿಯಲ್ಲಿ 13 ಜಿಲ್ಲೆಗಳಲ್ಲಿ ತೊಗರಿಬೆಳೆಯಲ್ಲಿ 20 ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಲಾಯಿತು. ಇದರಲ್ಲಿ 600 ರೈತರನ್ನು ಮತ್ತು 20 ವಿಸ್ತರಣಾ ಸಿಬ್ಬಂದಿಗೆ ತರಬೇತಿ ನೀಡಲಾಯಿತು.

ಎಣ್ಣೆಕಾಳು ಅಭಿವೃದ್ಧಿ ಯೋಜನೆಯಡಿಯಲ್ಲಿ 9 ಜಿಲ್ಲೆಗಳಲ್ಲಿ, ಎಣ್ಣೆಕಾಳು ಬೆಳೆಗಳಲ್ಲಿ, 271 ಪ್ರಾತ್ಯಕ್ಷಿಕೆಗಳನ್ನು (ಪ್ರತಿಯೊಂದು 10 ಹೆಕ್ಟೇರು) ಏರ್ಪಡಿಸಲಾಯಿತು. ಇದರಲ್ಲಿ ಕೃಷಿ ಇಲಾಖೆಯ ಕೌಶಲ್ಯ ತರಬೇತುದಾರರು ಮತ್ತು ಕೃಷಿ ವಿಶ್ವವಿದ್ಯಾನಿಲಯದ ವಿಜ್ಞಾನಿಗಳು 8130 ರೈತರಿಗೆ ತರಬೇತಿ ನೀಡಿರುತ್ತಾರೆ.

1995–96ನೇ ಸಾಲಿನಲ್ಲಿ ಸಮಗ್ರ ಪೀಡೆ ನಿರ್ವಹಣೆ ಪ್ರಾತ್ಯಕ್ಷಿಕೆ ಹಾಗೂ ತರಬೇತಿ ಕಾರ್ಯಕ್ರಮ:–

1995–96ನೇ ಸಾಲಿನಲ್ಲಿ, ರೈತರ ಕ್ಷೇತ್ರ ಶಾಲೆಯ ತತ್ವದ ಆಧಾರದ ಮೇಲೆ ಸಮಗ್ರ ಪೀಡೆ ನಿರ್ವಹಣೆ ಪ್ರಾತ್ಯಕ್ಷಿಕೆ ಹಾಗೂ ತರಬೇತಿ ಕಾರ್ಯಕ್ರಮಗಳನ್ನು, ಬತ್ತದ ಬೆಳೆಯ ಮೇಲೆ 20 ಗೊಂಚಲುಗಳಲ್ಲಿ (ಪ್ರತಿಯೊಂದು 40 ಹೆಕ್ಟೇರು) ಹತ್ತಿ ಬೆಳೆಯ ಮೇಲೆ 8 ಗೊಂಚಲುಗಳಲ್ಲಿ (ಪ್ರತಿಯೊಂದು 10 ಹೆಕ್ಟೇರು), ತೊಗರಿಬೆಳೆಯ ಮೇಲೆ 5 ಗೊಂಚಲುಗಳಲ್ಲಿ (ಪ್ರತಿಯೊಂದು 10 ಹೆಕ್ಟೇರು) ಏರ್ಪಡಿಸಲು ಯೋಜಿಸಲಾಗಿತ್ತು, ಇವುಗಳಲ್ಲಿ ಪ್ರತಿಯೊಂದು ಪ್ರಾತ್ಯಕ್ಷಿಕೆಯಲ್ಲಿ

120 ರೈತರು ಮತ್ತು 20 ವಿಸ್ತರಣಾ ಸಿಬ್ಬಂದಿಗೆ ತರಬೇತಿಯನ್ನು ನೀಡಲಾಗುವುದು. 1995-96ನೇ ಸಾಲಿನಲ್ಲಿ ಒಟ್ಟು 33 ಗೊಂಚಲು ಪ್ರಾತ್ಯಕ್ಷಿಕೆಗಳನ್ನು ಭತ್ತ, ರಾಗಿ, ಮತ್ತು ದ್ವಿದಳ ಧಾನ್ಯ ಬೆಳೆಗಳಲ್ಲಿ ಏರ್ಪಡಿಸಲಾಗುವುದು. ಭಾರತ ಸರ್ಕಾರವು ಪ್ರತಿ ಗೊಂಚಲು ಪ್ರಾತ್ಯಕ್ಷಿಕೆಗೆ ರೂ.36,100-00 ರಂತೆ ಆರ್ಥಿಕ ಸಹಾಯವನ್ನು ನೀಡುತ್ತದೆ.

ಬೆಳೆ ಅಭಿವೃದ್ಧಿ ಕಾರ್ಯಕ್ರಮ:-

ಅಧಿಕ ಇಳುವರಿ ತಳಿಗಳ ಕಾರ್ಯಕ್ರಮ:-

1966-67ರಲ್ಲಿ ಅಧಿಕ ಇಳುವರಿ:ಸಂಕರಣ ತಳಿಗಳನ್ನು ಬಳಕೆಗೆ ತಂದಾಗ, ಕೇವಲ 50,000 ಹೆಕ್ಟೇರ್ ಪ್ರದೇಶದಲ್ಲಿ ಆವರಿಸಿತ್ತು. ಮುಂದಿನ ವರ್ಷಗಳಲ್ಲಿ ವರ್ಷದಿಂದ ವರ್ಷಕ್ಕೆ ಹೆಚ್ಚಳದಲ್ಲಿ ಸ್ಥಿರತೆ ಕಂಡು ಬಂದಿದೆ. ಆಹಾರ ಉತ್ಪಾದನೆಯನ್ನು 45 ಲಕ್ಷ ಟನ್‌ಗಳಿಂದ ಪ್ರಸ್ತುತ 86 ಲಕ್ಷ ಟನ್‌ಗಳಿಗೆ ಏರಿಸಲು 60ರ ಮಧ್ಯಭಾಗದಲ್ಲಿ ಪ್ರಾರಂಭಿಸಿದ ಈ ಅಧಿಕ ಇಳುವರಿ ಕಾರ್ಯಕ್ರಮ ಮುಖ್ಯ ಕಾರಣವಾಗಿರುತ್ತದೆ. ಏಕದಳ ಧಾನ್ಯಗಳಿಂದ ಆವರಿಸಲ್ಪಟ್ಟಿರುವ ಸುಮಾರು 60.00 ಲಕ್ಷ ಹೆಕ್ಟೇರು ಪ್ರದೇಶದಲ್ಲಿ ನೀರಾವರಿ ಮತ್ತು ಮಳೆಯಾಶ್ರಿತಗಳೆರಡರಲ್ಲಿ ಸೇರಿ ಸುಮಾರು 36 ಲಕ್ಷ ಹೆಕ್ಟೇರ್ ಪ್ರದೇಶದ ಅಧಿಕ ಇಳುವರಿ ತಳಿಗಳ ಕಾರ್ಯಕ್ರಮದಡಿ ಆವರಿಸಲ್ಪಟ್ಟಿರುತ್ತದೆ. ಈ ಕಾರ್ಯಕ್ರಮಕ್ಕೆ ಉತ್ತಮ ಪ್ರತಿಕ್ರಿಯೆ ತೋರಿರುವ ಬೆಳೆಗಳೆಂದರೆ ಭತ್ತ, ರಾಗಿ, ಜೋಳ, ಮುಸುಕಿನ ಜೋಳ ಮತ್ತು ಗೋಧಿ. ಗಣನೀಯ ಕೃಷಿ ಪರಿಕರಗಳ ಬಳಕೆಯಿಂದಾಗಿ ಕಾರ್ಯಕ್ರಮ ಯಶಸ್ವಿಯಾಗಿ ಪರಿಕರಗಳ ಬಳಕೆಯಿಂದಾಗಿ ಕಾರ್ಯಕ್ರಮ ಯಶಸ್ವಿಯಾಗಿ ಮುಂದುವರಿದಿದೆ. ಸಕಾಲದಲ್ಲಿ ಮಳೆ ಬೀಳದಿದ್ದ ಪಕ್ಷದಲ್ಲಿ ಕೆಲವು ಬೆಳೆಗಳಲ್ಲಿನ ಅಲ್ಪಾವಧಿ ತಳಿಗಳು ಪರ್ಯಾಯ ಬೆಳೆ ಯೋಜನೆಯನ್ನು ಸಿದ್ಧಪಡಿಸಲು ಸಹಕಾರಿಯಾಗಿದೆ.

ಯವನ್ನು ಸಿದ್ಧಪಡಿಸಲು ಸಹಕಾರಿಯಾಗಿದೆ.

1994–95ನೇ ಸಾಲಿಗೆ ಯೋಜಿಸಿದ್ದ 36.48 ಲಕ್ಷ ಹೆಕ್ಟೇರುಗಳಿಗೆ ಪ್ರತಿಯಾಗಿ ಅಧಿಕ ಇಳುವರಿ ತಳಿಗಳ ಪ್ರದೇಶ 30.72 ಲಕ್ಷ ಹೆಕ್ಟೇರುಗಳಷ್ಟಿರುತ್ತದೆ. ಹಿಂದಿನ ವರ್ಷಗಳ ಪ್ರಗತಿ ಈ ಕೆಳಗಿನಂತಿರುತ್ತದೆ.

| | | |
|---|---|---|
| 1993–94 | .. | 31.66 ಲಕ್ಷ ಹೆಕ್ಟೇರ |
| 1992–93 | .. | 31.63 ಲಕ್ಷ ಹೆಕ್ಟೇರ |
| 1991–92 | .. | 33.64 —"— |
| 1990–91 | .. | 31.56 —"— |
| 1989–90 | .. | 31.84 —"— |
| 1988–89 | .. | 31.66 —"— |
| 1987–88 | .. | 29.32 —"— |
| 1986–87 | .. | 32.02 —"— |

1994–95ರ ಸಾಲಿನ ನೈರುತ್ಯ ಮಾರುತವು ರಾಜ್ಯದ ಕೆಲವು ಪ್ರದೇಶಗಳಲ್ಲಿ ತಡವಾಗಿ ಪ್ರಾರಂಭವಾದ್ದರಿಂದ ಹಾಗೂ ಅಚ್ಚುಕಟ್ಟು ಪ್ರದೇಶಗಳಿಗೆ ಜಲಾಶಯಗಳಿಂದ ತಡವಾಗಿ ನೀರು ಬಿಡುಗಡೆಯಾಗಿದ್ದರಿಂದ ಯೋಜಿತ ಪ್ರದೇಶದಲ್ಲಿ ಬಿತ್ತನೆ ಯಾಗದೆ ಅಧಿಕ ಇಳುವರಿ ಪ್ರದೇಶಗಳ ಒಟ್ಟು ಬಿತ್ತನೆ ಪ್ರದೇಶ ಕಡಿಮೆಯಾಗಿರುತ್ತದೆ.

ಕಿರು ಚೀಲಗಳು:–

ಇತ್ತೀಚೆಗೆ ಬಿಡುಗಡೆ ಮಾಡಿದ ಹಾಗೂ ಬಿಡುಗಡೆ ಪೂರ್ವದಲ್ಲಿರುವ ತಳಿಗಳನ್ನು ರೈತರೊಳಗೆ ಜನಪ್ರಿಯಗೊಳಿಸುವುದಕ್ಕೋಸ್ಕರ ಬತ್ತ, ರಾಗಿ ಮತ್ತು ಗೋಧಿ ಕಿರುಚೀಲಗಳ ಕಾರ್ಯಕ್ರಮವನ್ನು ಪೂರ್ಣವಾಗಿ ಕೇಂದ್ರ ಸರ್ಕಾರದ ಸಹಾಯ ಧನದಲ್ಲಿ ಜಾರಿಗೊಳಿಸಲಾಗಿದೆ.

1994-95ನೇ ಸಾಲಿನ ಕಾರ್ಯಕ್ರಮ ಹಾಗೂ ಪ್ರಗತಿ ಈ ಕೆಳಗಿನಂತಿದೆ:-

ಆರ್ಥಿಕ: (ಲಕ್ಷ ರೂ.ಗಳಲ್ಲಿ)

| ಬೆಳೆ | ಗುರಿ | | ಸಾಧನೆ | | 1995-96ರ ಕಾರ್ಯಕ್ರಮ | |
|---|---|---|---|---|---|---|
| | ಭೌತಿಕ (ಸಂಖ್ಯೆ) | ಆರ್ಥಿಕ | ಭೌತಿಕ (ಸಂಖ್ಯೆ) | ಆರ್ಥಿಕ | ಭೌತಿಕ (ಸಂಖ್ಯೆ) | ಆರ್ಥಿಕ |
| ಬತ್ತ | 20160 | 4.032 | 18875 | 2.671 | 24000 | 6.00 |
| ಮುಸುಕಿನ ಜೋಳ ಹಾಗೂ ತೃಣ ಧಾನ್ಯಗಳು | 49437 | 7.117 | 35038 | 2.771 | 56375 | 10.67 |
| ಗೋಧಿ | 500 | 0.40 | 500 | 0.40 | 1000 | 1.05 |

## ಸಮಗ್ರ ಏಕದಳ ಅಭಿವೃದ್ಧಿ ಕಾರ್ಯಕ್ರಮ ಒರಟು ಧಾನ್ಯಗಳು

ಭಾರತ ಸರ್ಕಾರವು ಅದರ ಪತ್ರದ ಸಂಖ್ಯೆ:ಸಿಪಿಎಸ್:6:(26) 92–ಸಿಂಮು– ದಿನಾಂಕ:28–1–94ರಲ್ಲಿ ಈ ಹಿಂದೆ ಇದ್ದ ಸಮಗ್ರ ಅಕ್ಕಿ ಅಭಿವೃದ್ಧಿ ಕಾರ್ಯಕ್ರಮ ಹಾಗೂ ವಿಶೇಷ ಆಹಾರೋತ್ಪಾದನಾ ಕಾರ್ಯಕ್ರಮಗಳನ್ನು (ಮುಸುಕಿನ ಜೋಳ ಹಾಗೂ ಧಾನ್ಯಗಳು) ಒಂದುಗೂಡಿಸಿ ಸಮಗ್ರ ಏಕ ದಳ ಧಾನ್ಯಗಳ ಅಭಿವೃದ್ಧಿ ಕಾರ್ಯಕ್ರಮ (ಒರಟು ಧಾನ್ಯ ಗಳು) ಎಂಬುದಾಗಿ ರೂಪಿಸಿದ ಮೇರೆಗೆ ರಾಜ್ಯದಲ್ಲಿ ದಿನಾಂಕ: 1–4–94ರಲ್ಲಿ ಜಾರಿಗೊಳಿಸಲಾಯಿತು. ಈ ಯೋಜನೆ ಯಡಿ ಭತ್ತ, ಗೋಧಿ, ಹಾಗೂ ಇತರ ಒರಟು ಧಾನ್ಯಗಳು ಅಂದರೆ ಮುಸುಕಿನ ಜೋಳ, ಜೋಳ, ಸಜ್ಜೆ, ರಾಗಿ ಹಾಗೂ ತೃಣಧಾನ್ಯಗಳಿಗೆ ಸಂಬಂಧಿಸಿದಂತೆ ಪ್ರಮಾಣಿತ ಬಿತ್ತನೆ ಬೀಜಗಳ ಪೂರೈಕೆ, ಎತ್ತುಗಳು:ಕೂಲಯಾಳು ಹಾಗೂ ಯಂತ್ರ ಚಾಲಿತ ಕೃಷಿ ಉಪಕರಣಗಳನ್ನು ಒದಗಿಸುವಿಕೆ ಗ್ರಾಮ ಪಂಚಾಯಿ ತಿಗಳಿಗೆ ಉತ್ಪಾದನಾ ಬಹುಮಾನಗಳನ್ನು ರಾಜ್ಯ 175 ತಾಲ್ಲೂಕುಗಳಲ್ಲೂ ಜಾರಿಗೊಳಿಸುವಿಕೆ ಮುಂತಾದ ಘಟಕ ಗಳನ್ನು ಅನುಷ್ಠಾನಗೊಳಿಸಲಾಗಿದ್ದು, ದೊಡ್ಡ ಪ್ರಮಾಣದ ಪ್ರಾತ್ಯಕ್ಷಿಕೆಗಳು, ಸಮಗ್ರ ಪೀಡೆ ನಿರ್ವಹಣೆ ಪ್ರಾತ್ಯಕ್ಷಿಕೆಗಳು ರೈತರಿಗೆ ಹಾಗೂ ಕೃಷಿ ಕಾರ್ಮಿಕರಿಗೆ ತರಬೇತಿ ಘಟಕಗಳನ್ನು ರಾಜ್ಯದ 111 ತಾಲ್ಲೂಕುಗಳಲ್ಲಿ ಕಾರ್ಯಗತಗೊಳಿಸ ಲಾಯಿತು.

1980ರ ದಶಕದ ಉತ್ಪಾದನಾ ಸ್ಥಗಿತದ ಕೊರತೆಯನ್ನು ಸರಿದೂಗಿಸಿದ ನಂತರ ಸಮಗ್ರ ಏಕದಳ ಧಾನ್ಯ ಅಭಿವೃದ್ಧಿ ಕಾರ್ಯಕ್ರಮವು ಭತ್ತದ ಉತ್ಪಾದನಾ ಮಟ್ಟವನ್ನು ಪ್ರತಿ ಹೆಕ್ಟೇರಿಗೆ ಗರಿಷ್ಟ 2377 ಕೆಜಿ.ಗೆ ಹೆಚ್ಚಿಸಲು ಒಂದು ಪ್ರಮುಖ ಯೋಜನೆಯನ್ನಾಗಿ ಜಾರಿಗೊಳಿಸಲಾಯಿತು. ರಾಜ್ಯದ ರೈತರಿಗೆ ರಿಯಾಯಿತಿ ದರದಲ್ಲಿ ಪ್ರಮಾಣಿತ ಬಿತ್ತನೆ ಬೀಜಗಳು, ಸುಧಾರಿತ ಕೃಷಿ ಉಪಕರಣಗಳು, ದೊಡ್ಡ ಪ್ರಮಾಣದ ಪ್ರಾತ್ಯಕ್ಷಿಕೆಗಳಿಗೆ ಪರಿಕರಗಳು ಹಾಗೂ ಸಮಗ್ರ ಪೀಡೆ ನಿರ್ವಹಣಾ ಪ್ರಾತ್ಯಕ್ಷಿಕೆಗಳಿಗೆ ನೆರವು ನೀಡಲಾಗುವುದು.

ಭಾರತ ಸರ್ಕಾರವು ಈ ಹಿಂದೆ 389.80 ಲಕ್ಷ ರೂ.ಗಳಿಗೆ ಆಡಳಿತ ಮಂಜೂರಾತಿಯನ್ನು ನೀಡಿತ್ತು. ತದನಂತರ ಗ್ರಾಮ ಪಂಚಾಯಿತಿಗಳಿಗೆ ಉತ್ಪಾದನಾ ಬಹುಮಾನಗಳನ್ನು ನೀಡಲು ರೂ 55,000 ಗಳಿಂದ 30,000 ಗಳಿಗೆ ಕಡಿತಗೊಳಿಸಿ ಈ ಹಿಂದೆ ನಿಗದಿಪಡಿಸಿದ 111 ತಾಲ್ಲೂಕುಗಳಿಗೆ ಬದಲಾಗಿ ರಾಜ್ಯದ ಎಲ್ಲಾ ತಾಲ್ಲೂಕುಗಳಿಗೂ ವಿಸ್ತರಿಸಲಾಯಿತು. ಇದರ ಪರಿಣಾಮವಾಗಿ ಈ ಯೋಜನೆಯ ಹಂಚಿಕೆಯು 380.34 ಲಕ್ಷಗಳಿಗೆ ಸೀಮಿತಗೊಂಡಿತು.

1994–95ನೇ ಸಾಲಿನಲ್ಲಿ ರೂ.380.34 ಲಕ್ಷ ರೂ.ಗಳ ಗುರಿಗೆ ಬದಲಾಗಿ ಮಾರ್ಚ್ 95ರ ಅಂತ್ಯದವರೆಗೆ 298.03 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಯಿತು. 1995–96ನೇ ಸಾಲಿಗೆ ರೂ 489.76 ಲಕ್ಷ ರೂ.ಗಳ ಅನುದಾನವನ್ನು ಈ ಯೋಜನೆಗೆ ನಿಗದಿ ಪಡಿಸಲಾಗಿದೆ.

1994-95ನೇ ಸಾಲಿನ ಸಮಗ್ರ ಏಕದಳ ಧಾನ್ಯಗಳ ಅಭಿವೃದ್ಧಿ ಕಾರ್ಯಕ್ರಮದ ಪ್ರಗತಿ

| ಕ್ರಮ ಸಂಖ್ಯೆ ಘಟಕಗಳು | ಗುರಿ ಭೌತಿಕ (ಸಂಖ್ಯೆ) | ಗುರಿ ಆರ್ಥಿಕ (ಲಕ್ಷ ರೂ.) | ಸಾಧನೆ ಭೌತಿಕ | ಸಾಧನೆ ಆರ್ಥಿಕ (ಲಕ್ಷ ರೂ.) |
|---|---|---|---|---|
| 1 | 2 | 3 | 4 | 5 |
| 1. ಬಿತ್ತನೆ ಬೀಜಕ್ಕೆ ರಿಯಾಯಿತಿ | | | | |
| ಎ) ಗೋಧಿ | 30570 | 61.140 | 26532 | 53.231 |
| ಬಿ) ಭತ್ತ | | | | |
| ಸಿ) ಮುಸುಕಿನ ಜೋಳ | | | | |
| ಡಿ) ಜೋಳ | 20650 | 82.600 | 18244 | 71.911 |
| ಇ) ಸಜ್ಜೆ | | | | |
| ಎಫ್) ರಾಗಿ | | | | |
| ಜಿ) ಇತರೆ ಧಾನ್ಯಗಳು | | | | |
| ಒಟ್ಟು | 51220 | 143.740 | 44776 | 125.142 |

| 1 | 2 | 3 | 4 | 5 |
|---|---|---|---|---|
| 2. ಕೃಷಿ ಉಪಕರಣಗಳು | | | | |
| 1. ಭತ್ತದ ನಾಟಿ ಯಂತ್ರ | | | | |
| 2. ಪಡ್ಲರ್ | | | | |
| 3. ಮುಸುಕಿನ ಜೋಳ ಸುಲಿಯುವ ಯಂತ್ರ | 8000 | 120.00 | 51414 | 137.162 |
| 3. ಯಂತ್ರಚಾಲಿತ ಉಪಕರಣಗಳು (ಸಂಖ್ಯೆ) | 550 | 27.500 | 119 | 5.362 |
| 4. ಕ್ಷೇತ್ರ ಪ್ರಾತ್ಯಕ್ಷಿಕೆಗಳು (ಸಂಖ್ಯೆ) | 555 | 11.100 | 138 | 6.848 |
| 5. ಸಮಗ್ರ ಪೀಡೆ ನಿರ್ವಹಣಾ ಪ್ರಾತ್ಯಕ್ಷಿಕೆಗಳು (ಸಂಖ್ಯೆ: | 150 | 9.000 | 150 | 7.222 |
| 6. ರೈತರ ತರಬೇತಿ (ಸಂಖ್ಯೆ) | 222 | 11.100 | 99 | 4.971 |
| 7. ಉತ್ಪಾದನಾ ಬಹುಮಾನಗಳು | 175 | 52.500 | 27 | 7.399 |
| 8. ಇತರೆ ವೆಚ್ಚ | — | 5.400 | — | 3.874 |
| ಒಟ್ಟು | | 380.340 | | 298.03 |

## ದ್ವಿದಳಧಾನ್ಯಗಳ ಅಭಿವೃದ್ಧಿ :—

### ರಾಷ್ಟ್ರೀಯ ದ್ವಿದಳಧಾನ್ಯ ಅಭಿವೃದ್ಧಿ ಕಾರ್ಯಕ್ರಮ :—

ಕರ್ನಾಟಕ ರಾಜ್ಯದಲ್ಲಿ ದ್ವಿದಳಧಾನ್ಯಗಳನ್ನು 16 ಜಿಲ್ಲೆಗಳಲ್ಲಿ ವ್ಯಾಪಕವಾಗಿ ಬೆಳೆಸಲಾಗುತ್ತಿದೆ. ದ್ವಿದಳಧಾನ್ಯಗಳ ಬೇಡಿಕೆಯು ಸುಮಾರು 10.00 ಲಕ್ಷ ಟನ್ನುಗಳಾಗಿದ್ದು, 2.0 ಲಕ್ಷ ಟನ್ನುಗಳಷ್ಟು ಕೊರತೆಯಿರುತ್ತದೆ. 1991–92ನೇ ಸಾಲಿನಲ್ಲಿ 8.10 ಲಕ್ಷ ಟನ್ನುಗಳ ಪ್ರಮುಖ ಸಾಧನೆ ಮಾಡಲಾಗಿದೆ. ದ್ವಿದಳಧಾನ್ಯಗಳನ್ನು ಪ್ರಮುಖವಾಗಿ ಮಳೆಯಾಶ್ರಿತ ಅದರಲ್ಲೂ ಕಳಪೆ ಭೂಮಿಯಲ್ಲಿ ಬೆಳೆಯುತ್ತಿದ್ದು ಕಾರಣ, ಹಿಂದಿನ ವರ್ಷಗಳಲ್ಲಿ ಇಳುವರಿಯು ಸಾಮಾನ್ಯವಾಗಿ ಕಡಿಮೆ ಇತ್ತು. ತೊಗರಿ, ಅಲಸಂಡೆ, ಕಡಲೆ ಮತ್ತು ಹೆಸರು ಬೆಳೆಗಳಲ್ಲಿ ಅಧಿಕ ಇಳುವರಿ ತಳಿಗಳನ್ನು ಕಂಡು ಹಿಡಿದ ಕಾರಣ ಭಾರತ ಸರ್ಕಾರದ ನೆರವಿನಿಂದ ರೈತರಿಗೆ ಬೀಜ, ರೈಜೋಬಿಯಂ, ಉಪಕರಣಗಳು, ಸಿಂಪರಕಗಳಿಗೆ ಸಹಾಯಧನ ಇತ್ಯಾದಿ ವಿಶೇಷ ಪ್ರೋತ್ಸಾಹವನ್ನು ನೀಡುವ ಮೂಲಕ ದ್ವಿದಳಧಾನ್ಯಗಳ ಉತ್ಪಾದನೆಯನ್ನು ಹೆಚ್ಚಿಸಲು ಉತ್ತಮ ಬೇಸಾಯ ವಿಧಾನಗಳ ಸಾಧನಾ ತಂತ್ರವನ್ನು ಸಿದ್ಧಪಡಿಸಲಾಗಿದೆ.

ದ್ವಿದಳಧಾನ್ಯಗಳ ಉತ್ಪಾದನೆಯನ್ನು ಹೆಚ್ಚಿಸಲು ಅನುಸರಿಸುತ್ತಿರುವ ಸಾಧನ ತಂತ್ರಗಳು:—

1) ಅಲ್ಪಾವಧಿ ತಳಿಗಳ ಪರಿಚಯ.
2) ಪೂರ್ಣ ಬೆಳೆಯಾಗಿವಿಸ್ತೀರ್ಣವನ್ನು ಹೆಚ್ಚಿಸುವುದು.
3) ಬಹು ಬೆಳೆ — ಬತ್ತದ ನಂತರ ದ್ವಿದಳಧಾನ್ಯ ಬೆಳೆ.
4) ಉತ್ತಮ ಸಾಧನಾ ತಂತ್ರಗಳು.
5) ಸಮಗ್ರ ಪೀಡೆ ನಿರ್ವಹಣೆ.

ದ್ವಿದಳಧಾನ್ಯಗಳ ಉತ್ಪಾದನೆಯು 5.46 ಲಕ್ಷ ಟನ್ನಿನಿಂದ

ರಾಷ್ಟ್ರೀಯ ದ್ವಿದಳ ಧಾನ್ಯ ಅಭಿವೃದ್ಧಿ ಯೋಜನೆಯ ಭೌತಿಕ ಹಾಗೂ ಆರ್ಥಿಕ ಪ್ರಗತಿ

ಭೌತಿಕ: ಸಂಖ್ಯೆ

ಆರ್ಥಿಕ ಲಕ್ಷ ರೂ.ಗಳಲ್ಲಿ

| ಕ್ರಮ ಸಂಖ್ಯೆ | ಘಟಕದ ವಿವರ | ಮಾಪನ | ಭೌತಿಕ ಗುರಿ | ಭೌತಿಕ ಸಾಧನೆ | ಆರ್ಥಿಕ ಗುರಿ | ಆರ್ಥಿಕ ಸಾಧನೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಕಿರುಚೀಲಗಳು (0.20 ಹೆ) 1) ಸಾಮಾನ್ಯ 2) ಹಿಂಗಾರು: ಬೇಸಿಗೆ | ಸಂಖ್ಯೆ | 40205<br>1704<br>41909 | 37391 | 32.00 | 28.805 |
| 2. | ಕ್ಷೇತ್ರ ಪ್ರಾತ್ಯಕ್ಷಿಕೆಗಳು (10 ಹೆ ) | ಸಂಖ್ಯೆ | 465 | — | 45.00 | 42.509 |
| 3. | ಬೀಜ ಗ್ರಾಮ (ಕ್ವಿಂ.ಗೆ ರೂ. 100) | ಕ್ವಿಂ. | 5000 | 6814 | 10.00 | 13.024 |
| 4. | ತಳಿವರ್ಧಕ ಬೀಜಗಳ ಖರೀದಿ (ಕ್ವಿಂ.ಗೆ 400) | ಕ್ವಿಂ. | 2500:<br>139 | 7145:<br>110 | 15.00 | 6.740 |
| 5. | ಪ್ರಮಾಣಿತ ಬಿತ್ತನೆ ಬೀಜಗಳ ವಿತರಣೆ (ಕ್ವಿಂ.ಗೆ 300 ರೂ.) | ಕ್ವಿಂ. | 5000 | 3991 | 15.00 | 13.016 |

| 1 | 2 | 3 | 4 | 5 | 6 | 7 |
|---|---|---|---|---|---|---|
| 6. | ತರಬೇತಿ (ಪ್ರತಿಯೊಂದು ರೂ.10000) | ಸಂಖ್ಯೆ | 10 | 10 | 1.00 | 0.781 |
| 7. | ಕೃಷಿ ಉಪಕರಣಗಳು | ಸಂಖ್ಯೆ | 2334 | 16044 | 35.00 | 32.806 |
| 8. | ಬೆಳೆ ಸಂಸ್ಕರಣ ಯಂತ್ರ(ಧಾನ್ಯ ಕಣಜ ಒಂದಕ್ಕೆ ರೂ.4000) | ಸಂಖ್ಯೆ | 100 | 13 | 4.00 | 1.945 |
| 9. | ತುಂತುರು ನೀರಾವರಿ(ರೂ.10000 ಒಂದಕ್ಕೆ) | ಸಂಖ್ಯೆ | 300 | 188 | 30.00 | 17.287 |
| 10. | ಸಮಗ್ರ ಪೀಡೆ ನಿರ್ವಹಣೆ ಪ್ರಾತ್ಯಕ್ಷಿಕೆ (ರೂ.15000: 10 ಹೆ) | ಸಂಖ್ಯೆ | 20 | 19 | 3.00 | 2.135 |
| 11. | ಫೆರೋಮೋನ್ ಬಲೆ(ರೂ.500:2 ಹೆ) | ಸಂಖ್ಯೆ | 400 | 461 | 2.00 | 1.543 |
| 12. | ಲಘು ಪೋಷಕಾಂಶಗಳು(ರೂ.100/ಹೆ) | ಸಂಖ್ಯೆ | 1000 | 601 | 1.00 | 0.582 |
| 13. | ರೈಜೋಬಿಯಂ ಅಜೋಲ ವಿ:ಪಿಎಸಬಿ (ರೂ.25:ಹೆ) | ಹೆ. | 12000 | 14821 | 3.00 | 2.526 |
| 14. | ಸಿಬ್ಬಂದಿ ವೇತನ ಮತ್ತು ಸಾದಿಲ್ವಾರು | | | — | 8.00 | 3.203 |
| | ಒಟ್ಟು | | | | 204.00 | 166.092 |

1995–96ನೇ ಸಾಲಿನಲ್ಲಿ ಈ ಯೋಜನೆಯನ್ನು ಕೊಡಗು ಜಿಲ್ಲೆಯನ್ನು ಹೊರತು ಪಡಿಸಿ ಉಳಿದ ಎಲ್ಲಾ ಜಿಲ್ಲೆಗಳಲ್ಲಿ ರೂ.229.169 ಲಕ್ಷಗಳ ಆರ್ಥಿಕ ಅನುದಾನದೊಂದಿಗೆ ಕಾರ್ಯಗತಗೊಳಿಸಲಾಯಿತು.

5.72 ಲಕ್ಷ ಟನ್ನುಗಳಿಗೆ (1992–93) ಹೆಚ್ಚಿರುವುದು ಗಮನಾರ್ಹ. 1994–95ನೇ ಸಾಲಿನಲ್ಲಿ 15.00 ಲಕ್ಷ ಹೆಕ್ಟೇರುಗಳಿಗೆ ಪ್ರತಿಯಾಗಿ 15.72 ಲಕ್ಷ ಹೆಕ್ಟೇರು ಪ್ರದೇಶದಲ್ಲಿ ಬಿತ್ತನೆಯಾಗಿತ್ತು.

ಕೇಂದ್ರ ಪುರಸ್ಕೃತ ರಾಷ್ಟ್ರೀಯ ದ್ವಿದಳಧಾನ್ಯ ಅಭಿವೃದ್ಧಿ ಯೋಜನೆಯನ್ನು 1986–87ನೇ ಸಾಲಿನಿಂದ ಕೊಡಗು ಜಿಲ್ಲೆಯನ್ನು ಹೊರತುಪಡಿಸಿ, ಎಲ್ಲಾ ಜಿಲ್ಲೆಗಳಲ್ಲೂ ಕಾರ್ಯಗತವಾಗುತ್ತಿದೆ. (ಶೇ.25:75ರ ರಾಜ್ಯ:ಕೇಂದ್ರ ಸರ್ಕಾರಗಳ ಅನುದಾನ) 1994–95ನೇ ಸಾಲಿನಲ್ಲಿ 204.00 ಲಕ್ಷ ರೂ.ಗಳ ಗುರಿಗೆ ಪ್ರತಿಯಾಗಿ 166.902 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಯಿತು. ವಿವರವನ್ನು ಅನುಬಂಧದಲ್ಲಿ ನೀಡಿದೆ. ರೂ.231.35. ಲಕ್ಷ ರೂ.ಗಳನ್ನು 95–96ನೇ ಸಾಲಿಗೆನಿಗದಿ ಪಡಿಸಿದೆ.

ಎಣ್ಣೆಕಾಳು ಅಭಿವೃದ್ಧಿ ಕಾರ್ಯಕ್ರಮ:–

ಕರ್ನಾಟಕ ರಾಜ್ಯವು ಭಾರತದಲ್ಲಿ ಒಂದು ಪ್ರಮುಖ ಎಣ್ಣೆಕಾಳು ಉತ್ಪಾದನಾ ರಾಜ್ಯವಾಗಿದ್ದು, ಒಟ್ಟು ಎಣ್ಣೆಕಾಳು ಉತ್ಪಾದನೆಯಲ್ಲಿ 5ನೇ ಸ್ಥಾನದಲ್ಲಿರುತ್ತದೆ. ಎಣ್ಣೆಕಾಳು ಉತ್ಪಾದನೆಯು ಇತ್ತೀಚಿನ ವರ್ಷಗಳಲ್ಲಿ ಹೆಚ್ಚಾಗಿರುತ್ತದೆ.

ದೇಶದಲ್ಲಿ ಖಾದ್ಯ ತೈಲದ ಕೊರತೆಯು ಪುನರಾವರ್ತನೆಯಾಗುತ್ತಿರುವುದರಿಂದ, ಭಾರತ ಸರ್ಕಾರವು ಮೇ, 1986ರಲ್ಲಿ ಎಣ್ಣೆಕಾಳು ತಂತ್ರಜ್ಞಾನ ಸಮಿತಿಯನ್ನು ಸ್ಥಾಪಿಸಿತು.

1994–95ನೇ ಸಾಲಿನಲ್ಲಿ 29.00 ಲಕ್ಷ ಹೆಕ್ಟೇರುಗಳ ಗುರಿಗೆ ಬದಲಾಗಿ 25.36 ಲಕ್ಷ ಹೆಕ್ಟೇರು ಪ್ರದೇಶಗಳಲ್ಲಿ ಎಣ್ಣೆ ಕಾಳುಗಳನ್ನು ಬೆಳೆಸಲಾಗಿದೆ.

ಎಣ್ಣೆಕಾಳು ಉತ್ಪಾದನಾ ಕಾರ್ಯಕ್ರಮ:–

ಪ್ರಸಕ್ತ, 1994–95ರಲ್ಲಿ ಎಣ್ಣೆಕಾಳು ಉತ್ಪಾದನಾ

ಎಣ್ಣೆಕಾಳು ಉತ್ಪಾದನಾ ಕಾರ್ಯಕ್ರಮದಡಿಯಲ್ಲಿ ವಿವಿಧ ಘಟಕದಡಿಯಲ್ಲಿನ ಭೌತಿಕ ಹಾಗೂ ಆರ್ಥಿಕ ಪ್ರಗತಿ

(ಆರ್ಥಿಕ ಲಕ್ಷ ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಘಟಕದ ವಿವರ | ಭೌತಿಕ ಗುರಿ | ಭೌತಿಕ ಸಾಧನೆ | ಆರ್ಥಿಕ ಗುರಿ | ಆರ್ಥಿಕ ಸಾಧನೆ |
| --- | --- | --- | --- | --- | --- |
| 1 | 2 | 3 | 4 | 5 | 6 |
| 1. | ತಳಿವರ್ಧಕ ಬೀಜಗಳ ಖರೀದಿ (ಕ್ವಿಂ.ಗಳಲ್ಲಿ) | 5500 | 575.45 | 20.56 | 20.812 |
| 2. | ಮೂಲ ಬಿತ್ತನೆ ಬೀಜಗಳ ಉತ್ಪಾದನೆ (") | 5000 | 1015.6 | 10.00 | 2.041 |
| 3. | ಪ್ರಮಾಣಿತ ಬೀಜಗಳ ವಿತರಣೆ (ರೂ.500:ಕ್ವಿಂ) | 38000 | 12778.78 | 114.00 | 36.545 |
| 4. | ಬೀಜಗ್ರಾಮ ಯೋಜನೆ | 22500 | 9930.29 | 45.00 | 19.854 |
| 5. | ಕಿರುಚೀಲಗಳ ವಿತರಣೆ | 37500 | 51305. | 55.45 | 45.642 |
| 6. | ಹೊಸ ಮಾರಾಟ ಕೇಂದ್ರಗಳ ತೆರೆಯುವಿಕೆ (ರೂ.5000 ಪ್ರತಿ ಕೇಂದ್ರಕ್ಕೆ) | 50 | 4 | 2.50 | 0.20 |
| 7. | ಒಳ ಹಂದರ ಅಭಿವೃದ್ಧಿ | — | — | 70.00 | 66.885 |
| 8. | ಬೀಜೋಪಚಾರ ಔಷಧಿಗಳ ಪೂರೈಕೆ | — | — | 10.00 | 8.375 |
| 9. | ಸಂ.ಪಿ.ನಿ. ಪ್ರಾತ್ಯಕ್ಷಿಕೆ ಹಾಗೂ ತರಬೇತಿ | 2710 | 2710 | 40.65 | 35.166 |

| 1 | 2 | 3 | 4 | 5 | 6 |
|---|---|---|---|---|---|
| 10. | ಬೀಜೋಪಚಾರದಿಂದ ಗೊಣ್ಣೆ ಹುಳುವಿನ ಹತೋಟಿ (ರೂ.500: ಹೆ.ಗೆ) | 5050 | 8[illegible]8 | 25.25 | 35.171 |
| 11. | ಮೋಹಕ ಬಲೆ ಪ್ರಾತ್ಯಕ್ಷಿಕೆಗಳು (ರೂ.250 ಹೆ.ಗೆ) | 5460 | 5624 | 13.65 | 16.384 |
| 12. | ದೊಡ್ಡಪ್ರಮಾಣದ ಪ್ರಾತ್ಯಕ್ಷಿಕೆಗಳು (ಹೆ) | 12470 | 9985 | 173.35 | 135.422 |
| 13. | ಸುಧಾರಿತ ಕೃಷಿ ಉಪಕರಣಗಳ ವಿತರಣೆ (ಶೇ 50ರ ರಿಯಾಯಿತಿ ರೂ.1500) | 4395 | 44416 | 65.925 | 118.368 |
| 14. | ಜಿಪ್ಸಂ ಪೂರೈಕೆ (ರೂ.200: ಹೆ.ಗೆ) | 41295 | 45185 | 82.59 | 85.217 |
| 15. | ತುಂತುರು ನೀರಾವರಿ ಉಪಕರಣಗಳ ವಿತರಣೆ (ರೂ.10,000 ಪ್ರತಿ ಜೋಡಿ) | 1130 | 712 | 113.00 | 70.555 |
| 16. | ರೈಜೋಬಿಯಂ ಅಜೋಲ ವಿತರಣೆ ಮತ್ತು ಪಿ.ಎಸ್.ಬಿ | 32700 | 35791 | 8.173 | 5.541 |
| 17. | ಲಘುಪೋಷಕಾಂಶಗಳ ವಿತರಣೆ (ರೂ. 100 : ಹೆ) | 6300 | 5374 | 6.30 | 5.639 |
| 18. | ರೈತ ತರಬೇತಿಗಳನ್ನು ಏರ್ಪಡಿಸುವುದು (ತರಬೇತಿ ಒಂದಕ್ಕೆ ರೂ.10,000) | 76 | 69 | 7.6 | 6.133 |

| 1 | 2 | 3 | 4 | 5 | 6 |
|---|---|---|---|---|---|
| 19. | ಸಿಬ್ಬಂದಿ ಮತ್ತು ಸಾದಿಲ್ವಾರು | – | – | 38.00 | 26.047 |
| | ಒಟ್ಟು | | | 901.80 | 740.214 |

ಕಾರ್ಯಕ್ರಮವನ್ನು 75:25ರ ಕೇಂದ್ರ ಮತ್ತು ರಾಜ್ಯ ಪಾಲಿನೊಂದಿಗೆ ಕಾರ್ಯಗತಗೊಳಿಸಲಾಯಿತು. (ಮೂಲ ಬೀಜೋತ್ಪಾದನೆಯನ್ನು ಹೊರತುಪಡಿಸಿದಂತೆ ಇದು ಭಾರತ ಸರ್ಕಾರದಿಂದ ಶೇ.100ರ ಪ್ರಮಾಣ). 1994–95ನೇ ಸಾಲಿಗೆ ಒದಗಿಸಲಾದ ಒಟ್ಟು 901.80 ಲಕ್ಷ ರೂ.ಗಳ ಆರ್ಥಿಕ ಅನುದಾನದಲ್ಲಿ ಮಾರ್ಚ್ ಅಂತ್ಯದ ವರೆಗೆ 740.214 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಯಿತು. (ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ)

1995–96ನೇ ಸಾಲಿನ ಎಣ್ಣೆಕಾಳು ಉತ್ಪಾದನಾ ಕಾರ್ಯಕ್ರಮಕ್ಕೆ 919.06 ಲಕ್ಷ ರೂ.ಗಳನ್ನು ತಾತ್ಕಾಲಿಕವಾಗಿ ನಿಗದಿಪಡಿಸಲಾಗಿದೆ.

<u>ಹತ್ತಿ ಅಭಿವೃದ್ಧಿ:—</u>

ಕರ್ನಾಟಕವು ಭಾರತದಲ್ಲಿ ಒಂದು ಮುಖ್ಯ ಹತ್ತಿ ಉತ್ಪಾದನಾ ರಾಜ್ಯವಾಗಿರುತ್ತದೆ. ಇದು ವಾರ್ಷಿಕ ಉತ್ಪಾದನೆಯು ಸುಮಾರು 9.0 ಲಕ್ಷ ಬೇಲುಗಳಷ್ಟಿದ್ದು, ವಿಸ್ತೀರ್ಣ ಸುಮಾರು 6 ಲಕ್ಷ ಹೆಕ್ಟೇರಿಗೂ ಮೇಲ್ಪಟ್ಟದಲ್ಲಿರುತ್ತದೆ ಮತ್ತು ಉತ್ಪಾದಕತೆಯು ಹೆಕ್ಟೇರಿಗೆ ಹೆಚ್ಚು ಕಡಿಮೆ 131 ಕಿ.ಗ್ರಾಂ. ರಂಟೆ ನಷ್ಟು ಇರುತ್ತದೆ. ರಾಜ್ಯದ ಒಟ್ಟು ಹತ್ತಿ ಬೆಳೆಯುವ ಪ್ರದೇಶದಲ್ಲಿ ಶೇ.65 ಭಾಗ ಮಳೆಯ ಆಶ್ರಯದಲ್ಲಿದ್ದು ಪೂರ್ವ ಭಾಗದಲ್ಲಿ ಮಳೆಯಾಶ್ರಿತ ತಳಿಗಳಾದ ಲಕ್ಷ್ಮೀ, ಜಯಧರ ಮುಂತಾದವುಗಳನ್ನು ಬೆಳೆಯಲಾಗುತ್ತಿದ್ದು, ಇವುಗಳ ಉತ್ಪಾದಕತೆಯು ಹೆಕ್ಟೇರಗೆ 52ರಿಂದ 75 ಕಿ.ಗ್ರಾಂ.ನಷ್ಟಿರುತ್ತದೆ. ಉಳಿಕೆ ಶೇ.35 ಭಾಗವು ನಿಶ್ಚಿತ ಮಳೆಯಾಶ್ರಿತ ಅರೆ ಮಲೆನಾಡು ಮತ್ತು ನೀರಾವರಿ ಪ್ರದೇಶದಲ್ಲಿರುತ್ತದೆ. ಇತ್ತೀಚಿನ ವರ್ಷಗಳಲ್ಲಿ ಸೂರ್ಯಕಾಂತಿ, ಉದ್ದು, ಕುಸುಮೆ ಮುಂತಾದ ಇತರೆ ಸ್ಪರ್ಧಾತ್ಮಕ ಬೆಳೆಗಳಿಂದಾಗಿ ಹತ್ತಿಯು

ವಿಸ್ತೀರ್ಣವು 6 ರಿಂದ 5.0 ಲಕ್ಷ ಹೆಕ್ಟೇರುಗಳಿಗೆ ಇಳಿದಿರುತ್ತದೆ. 1994–95ನೇ ಸಾಲಿನಲ್ಲಿ 6.0 ಲಕ್ಷ ಹೆಕ್ಟೇರು ಕಾರ್ಯಕ್ರಮಕ್ಕೆ ಪ್ರತಿಯಾಗಿ 5.96 ಲಕ್ಷ ಹೆಕ್ಟೇರು ಪ್ರದೇಶದಲ್ಲಿ ಹತ್ತಿಯನ್ನು ಬೆಳೆಸಲಾಗಿದೆ.

ತೀವ್ರ ಹತ್ತಿ ಅಭಿವೃದ್ಧಿ ಯೋಜನೆ:–

ಈ ಯೋಜನೆಯು ಉದ್ದ ಎಳೆಯ ಹಾಗೂ ಮಧ್ಯಮ ಎಳೆಯ ಹತ್ತಿಯನ್ನು ಹೆಚ್ಚಿಗೆ ಉತ್ಪಾದಿಸುವ ಉದ್ದೇಶದ ಒಂದು ಮುಖ್ಯ ಒತ್ತು ಕಾರ್ಯಕ್ರಮವಾಗಿದೆ. ಪ್ರಮಾಣಿತ ಬೀಜ, ಸಸ್ಯ ಸಂರಕ್ಷಣಾ ರಾಸಾಯನಿಕಗಳು, ಸಸ್ಯ ಸಂರಕ್ಷಣಾ ಉಪಕರಣಗಳು, ತುಂತುರು ನೀರಾವರಿ ಘಟಕಗಳು ಮುಂತಾದವುಗಳನ್ನು ರಿಯಾಯಿತಿ ದರದಲ್ಲಿ ಒದಗಿಸುವುದರ ಮೂಲಕ ರೈತರಿಗೆ ಸಹಾಯವನ್ನು ಒದಗಿಸಲಾಯಿತು. ಈ ಬೆಳೆಯನ್ನು ಹೆಚ್ಚಾಗಿ ಬೆಳೆಯುವ ಧಾರವಾಡ, ಬೆಳಗಾಂ, ಬಳ್ಳಾರಿ, ರಾಯಚೂರು ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಈ ಯೋಜನೆಯು ಕಾರ್ಯರೂಪದಲ್ಲಿರುತ್ತದೆ. ನೀರಾವರಿ ಮತ್ತು ನಿಶ್ಚಿತ ಮಳೆ ಪರಿಸ್ಥಿತಿಯಲ್ಲಿ ಹತ್ತಿಯನ್ನು ಬೆಳೆದು, ಹೆಚ್ಚಿನ ಉತ್ಪಾದನೆ ಮತ್ತು ಉತ್ಪಾದಕತೆಗೆ ಒತ್ತನ್ನು ನೀಡಲಾಯಿತು. ಕೇಂದ್ರ ಪುರಸ್ಕೃತ ತೀವ್ರ ಹತ್ತಿ ಅಭಿವೃದ್ಧಿ ಯೋಜನೆಯಲ್ಲಿ ನೀಡಲಾದ 109.00 ಲಕ್ಷ ರೂ.ಗಳಿಗೆ ಮಾರ್ಚ್ ಅಂತ್ಯದ ವರೆಗೆ 85.475 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಯಿತು.

1995–96ರ ಸಾಲಿಗೆ 6.00 ಲಕ್ಷ ಹೆಕ್ಟೇರು ಪ್ರದೇಶದಲ್ಲಿ ಹತ್ತಿಯನ್ನು ಬೆಳೆಯುವ ಹಾಗೂ 9.0 ಲಕ್ಷ ಬೇಲುಗಳ ಉತ್ಪಾದನಾ ಮಟ್ಟದ ಕಾರ್ಯಕ್ರಮವಿರುತ್ತದೆ. 1995–96ರ ಸಾಲಿನಲ್ಲಿ ತೀವ್ರ ಹತ್ತಿ ಅಭಿವೃದ್ಧಿ ಯೋಜನೆಯನ್ನು 61.86 ಲಕ್ಷ ರೂ.ಗಳ ಅನುದಾನದಲ್ಲಿ ಜಾರಿಗೊಳಿಸುವ

ಕಾರ್ಯಕ್ರಮವಿರುತ್ತದೆ.

ತಂಬಾಕು ಅಭಿವೃದ್ಧಿ ಯೋಜನೆ:—

ತಂಬಾಕು ರಾಜ್ಯದ ಒಂದು ಮುಖ್ಯ ವಾಣಿಜ್ಯ ಬೆಳೆ ಯಾಗಿದ್ದು, ಸುಮಾರು 50,000 ಹೆಕ್ಟೇರು ಪ್ರದೇಶದಲ್ಲಿ ಬೆಳೆಯಲಾಗುತ್ತಿದ್ದು, ಉತ್ಪಾದನೆಯು ಸುಮಾರು 50 ಮಿಲಿಯನ ಕಿ.ಗ್ರಾಂ. ಇದರಲ್ಲಿ ವಿ.ಎಫ್.ಸಿ. ತಂಬಾಕು ಸುಮಾರು 30 ಮಿಲಿಯನ ಕಿ.ಗ್ರಾಂ.ರಷ್ಟಿರುತ್ತದೆ. ಮೈಸೂರು, ಕೊಡಗು, ಹಾಸನ, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ವಿ.ಎಫ್.ಸಿ. ತಂಬಾಕನ್ನು ಹಾಗೂ ಚಿತ್ರದುರ್ಗ, ತುಮಕೂರು, ಬೆಳಗಾಂ, ಧಾರವಾಡ, ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲಿ ಬೀಡಿ ತಂಬಾಕನ್ನು ಬೆಳೆಯಲಾಗುತ್ತಿದೆ.

1994—95ನೇ ಸಾಲಿನಲ್ಲಿ ಬೀಡಿ ತಂಬಾಕನ್ನು 22,820 ಹೆಕ್ಟೇರು ಪ್ರದೇಶದಲ್ಲೂ, ವರ್ಜೀನಿಯಾ ಫ್ಲೂ ಕ್ಯೂರ್ಡ್ ತಂಬಾಕನ್ನು 32,528 ಹೆಕ್ಟೇರು ಪ್ರದೇಶದಲ್ಲೂ ಬೆಳೆಯಲಾಯಿತು. ಇವುಗಳ ಗುರಿಗಳು ಕ್ರಮವಾಗಿ 28,000 ಮತ್ತು 30,000 ಹೆಕ್ಟೇರುಗಳಾಗಿತ್ತು. ಹೆಚ್ಚಿನ ಉತ್ಪಾದಕತೆ ಮತ್ತು ಉತ್ತಮ ಗುಣಮಟ್ಟಕ್ಕಾಗಿ ಸುಧಾರಿತ ಬೇಸಾಯ ಕ್ರಮಗಳನ್ನು ಅಳವಡಿಸುವಂತೆ ರೈತರಿಗೆ ತಿಳುವಳಿಕೆ ನೀಡಲು 1994—95ನೇ ಸಾಲಿನಲ್ಲಿ 1.00 ಲಕ್ಷ ರೂ.ಗಳನ್ನು ಒದಗಿಸಲಾಗಿತ್ತು. ಈ ಸಾಲಿನಲ್ಲಿ ಮೈಸೂರು ಮತ್ತು ಶಿವಮೊಗ್ಗದಲ್ಲಿ ಫ್ಲ್ಯೂ ಕ್ಯೂರ್ಡ್ ತಂಬಾಕಿನಲ್ಲಿ ಹಾಗೂ ನಿಪ್ಪಾಣಿಯಲ್ಲಿ ಬೀಡಿ ತಂಬಾಕಿನಲ್ಲಿ ತರಬೇತಿ ಕಾರ್ಯಕ್ರಮವನ್ನು ಯೋಜಿಸಲಾಗಿತ್ತು.

1995—96ರಲ್ಲಿ ತಂಬಾಕನ್ನು 55,000 ಹೆಕ್ಟೇರು

ಪ್ರದೇಶದಲ್ಲಿ ಬೆಳೆಯು 52,720 ಮಿಲಿಯನ್ ಕಿ.ಗ್ರಾಂ. ಉತ್ಪಾದನಾ ಗುರಿಯನ್ನು ಹೊಂದಲಾಗಿದೆ. ಇದರಲ್ಲಿ 30 ಮಿಲಿಯನ್ ಕಿ.ಗ್ರಾಂ. ಹಾಗೂ 30,000 ಹೆಕ್ಟೇರ ವಿ.ಎಫ್.ಸಿ. ಇಳುವರಿಯಲ್ಲೂ ಹಾಗೂ 22,720 ಮಿಲಿಯನ್ ಕಿ.ಗ್ರಾಂ. ಹಾಗೂ 25,000 ಹೆಕ್ಟೇರು ಬೀಡಿ ತಂಬಾಕಿನ ಕಾರ್ಯಕ್ರಮವಿದ್ದು, ಉತ್ಪಾದಕತಾ ಗುರಿಯು ಹೆಕ್ಟೇರಿಗೆ ಕ್ರಮವಾಗಿ 1000 ಕಿ.ಗ್ರಾಂ. ವಿ.ಎಫ್.ಸಿ.ನಲ್ಲಿ ಮತ್ತು 875 ಕಿ.ಗ್ರಾಂ. ಬೀಡಿ ತಂಬಾಕಿನಲ್ಲಿ ಇರುವಂತಾಗಿ ನಿಗದಿಪಡಿಸಲಾಗಿದೆ. 1995-96ರ ಸಾಲಿನಲ್ಲಿ ಉತ್ಪಾದಕತೆಯನ್ನು ಸ್ಥಿರೀಕರಿಸಲು ವಿವಿಧ ಕಾರ್ಯಕ್ರಮಗಳಿಗಾಗಿ 3 ಲಕ್ಷ ರೂ.ಗಳನ್ನು ತಾತ್ಕಾಲಿಕವಾಗಿ ನಿಗದಿ ಪಡಿಸಲಾಗಿದೆ.

<u>ಕಬ್ಬು ಅಭಿವೃದ್ಧಿ ಕಾರ್ಯಕ್ರಮ</u>:-

ಕಬ್ಬು ರೈತರಿಗೆ ಬಹು ಲಾಭದಾಯಕ ಬೆಳೆ ಮತ್ತು ಇದು ಕಳೆದ ದಶಕದಲ್ಲಿ ಗಣನೀಯ ಹೆಚ್ಚಳವನ್ನು ಸಾಧಿಸಿರುತ್ತದೆ. 60ರ ದಶಕದಲ್ಲಿ ಸುಮಾರು 1.00 ಲಕ್ಷ ಹೆಕ್ಟೇರಿನಷ್ಟು ಇದ್ದ ವಿಸ್ತೀರ್ಣವು ಈಗ ಇದು 2.0 ಲಕ್ಷ ಹೆಕ್ಟೇರಿಗೂ ಹೆಚ್ಚು ವಿಸ್ತೀರ್ಣವನ್ನು ಆವರಿಸಿರುತ್ತದೆ.

1994-95ನೇ ಸಾಲಿನಲ್ಲಿ 2.15 ಲಕ್ಷ ಹೆಕ್ಟೇರು ಗುರಿಗೆ ಬದಲಾಗಿ 2.30 ಲಕ್ಷ ಹೆಕ್ಟೇರು ವಿಸ್ತೀರ್ಣವನ್ನು ಸಾಧಿಸಲಾಗಿದೆ. ಕಬ್ಬು ಬೆಳೆಗಾರರಿಗೆ ಬಿತ್ತನೆ ಬೀಜಗಳ ದ್ವಿಗುಣಗೊಳಿಸುವಿಕೆಗಾಗಿ ಬಿತ್ತನೆ ತುಂಡುಗಳ ಮೇಲೆ ಹೆಕ್ಟೇರಿಗೆ 2,200 ರೂ.ಗಳ ಸಹಾಯ ಧನವನ್ನು ಹಾಗೂ ಸಾಗಾಣಿಕೆ ಸಹಾಯಧನವಾಗಿ ಪ್ರತಿ ಹೆಕ್ಟೇರಿಗೆ ರೂ.500 ಗಳಂತೆ ಕಬ್ಬು ಬೆಳೆಗಾರರಿಗೆ ಒದಗಿಸಲಾಯಿತು.

ನಾಲ್ಕು ವರ್ಷಗಳ ಅವಧಿಯಲ್ಲಿ ಉತ್ಪಾದಕತೆಯು ಹೆಕ್ಟೇರಿಗೆ 82 ಟನ್ನುಗಳಿಂದ 92 ಟನ್ನುಗಳಿಗೆ ಹೆಚ್ಚರುವುದು

ಗಮನಾರ್ಹ ವಿಷಯವಾಗಿರುತ್ತದೆ. 1994–95ನೇ ಸಾಲಿನಲ್ಲಿ ಇದನ್ನು 119 ಟನ್ನುಗಳಿಗೆ ಹೆಚ್ಚಿಸಲು ಉದ್ದೇಶಿಸಲಾಗಿದೆ.

1995–96ರಲ್ಲಿ 2.15 ಲಕ್ಷ ಹೆಕ್ಟೇರು ಪ್ರದೇಶದಲ್ಲಿ ಕಬ್ಬನ್ನು ಬೆಳೆದು 225 ಲಕ್ಷ ಟನ್ನುಗಳ ಉತ್ಪಾದನಾ ಗುರಿಯನ್ನು ಹಮ್ಮಿಕೊಳ್ಳಲಾಗಿದೆ. ರೂ.70.00 ಲಕ್ಷಗಳ ವೆಚ್ಚದಲ್ಲಿ ಹನಿ ನೀರಾವರಿ ಘಟಕಗಳನ್ನು ಹತ್ತಿ ಮತ್ತು ಕಬ್ಬು ಬೆಳೆಗೆ ಅಳವಡಿಸಲು ಹಾಗೂ ಜಿಲ್ಲಾವಲಯದಲ್ಲಿ 12.59 ಲಕ್ಷ ರೂ. ವೆಚ್ಚದಲ್ಲಿ ಒಟ್ಟುಪಾತಿ ಪ್ರದೇಶಗಳನ್ನು ಅಭಿವೃದ್ಧಿ ಪಡಿಸಲು ಉದ್ದೇಶಿಸಲಾಗಿದೆ. ಇದಲ್ಲದೆ ರಾಜ್ಯ ಸರ್ಕಾರದ 25.00 ಲಕ್ಷ ರೂ.ಗಳ ನೆರವಿನೊಂದಿಗೆ ಕಬ್ಬು ಅಭಿವೃದ್ಧಿ ಯೋಜನೆಯಡಿ ಕಬ್ಬು ಆಧಾರಿತ ಬೆಳೆ ಪದ್ಧತಿಯನ್ನು ಜಾರಿಗೊಳಿಸಲಾಗುವುದು.

ಹನಿ ತನೀ

ಕಬ್ಬು ಮತ್ತು ಹತ್ತಿ ಬೆಳೆಯಲ್ಲಿ ಹನಿ ನೀರಾವರಿ:—

ಏತ ನೀರಾವರಿ ಪದ್ಧತಿಯಲ್ಲಿ ಸಾಂಪ್ರದಾಯಿಕ ನೀರಾವರಿಯಡಿ ನೀರು ಹಾಯಿಸುವುದಕ್ಕಿಂತ ಹನಿ ನೀರಾವರಿ ಪದ್ಧತಿಯಡಿಯಲ್ಲಿ ನೀರನ್ನು ಮಿತವಾಗಿ ಬಳಸಲು ಅಪಾರ ಅವಕಾಶಗಳಿವೆ. ನೀರಿನ ಅಭಾವವಿರುವಂತಹ ಪ್ರದೇಶಗಳಲ್ಲಿ ಹನಿ ನೀರಾವರಿ ಪದ್ಧತಿಯು ರೈತರಲ್ಲಿ ಹೆಚ್ಚು ಜನಪ್ರಿಯ ವಾಗುತ್ತಿದೆ. ರೈತರು ಈ ಪದ್ಧತಿಗಳಿಂದ 40ರಿಂದ 60 ರಷ್ಟು ನೀರನ್ನು ಉಳಿತಾಯ ಮಾಡಬಹುದಾಗಿದೆ. ಎರಡು ಹಂಗಾಮು ಬೆಳೆಗಳಾದ ಕಬ್ಬು ಮತ್ತು ಹತ್ತಿ ಬೆಳೆಗಳು ಹನಿ ನೀರಾವರಿಗೆ ಉತ್ತಮವಾಗಿ ಸ್ಪಂದಿಸುತ್ತಿರುವುದು ಕಂಡು ಬಂದಿದೆ.

ರಿಯಾಯಿತಿಯ ಶ್ರೇಣಿಯು 0.4ರಿಂದ 2.0 ಹೆಕ್ಟೇರಗಳಿಗೆ 14,000 ರೂ.ಗಳಿಂದ 48,000 ಗಳ ವರೆಗೆ ಇರುತ್ತದೆ. 1994–95ನೇ ಸಾಲಿನಲ್ಲಿ 116.50 ಲಕ್ಷ ರೂ.

ಗಳನ್ನು ಬಳಸಿಕೊಂಡು 375 ಹನಿ ನೀರಾವರಿ ಉಪಕರಣಗಳನ್ನು ವಿತರಿಸಲಾಯಿತು. ಇದರಿಂದ 478.81ಹೆಕ್ಟೇರಗಳಷ್ಟು ವಿಸ್ತೀರ್ಣವನ್ನು ಆವರಿಸಿದಂ 1993–94ನೇ ಸಾಲಿನ ಉಳಿತಾಯದ ಹಣವನ್ನು ಬಳಸಿಕೊಳ್ಳಲಾಯಿತು.

ಕೃಷಿ ಉಪಕರಣಗಳು:–

ಕೃಷಿ ಉಪಕರಣಗಳು ಪ್ರದೇಶ ಮತ್ತು ಬೆಳೆ ನಿಶ್ಚಿತ. ವಿವಿಧ ಕೃಷಿ ಹವಾಮಾನ ಪರಿಸ್ಥಿತಿಗಳಿಗೆ ಸರಿಹೊಂದುವ ಉಪಕರಣ ಗಳನ್ನು ಗುರುತಿಸಲು ಸಾಕಷ್ಟು ಪ್ರಯತ್ನಗಳನ್ನು ಮಾಡ ಲಾಗಿದೆ. ಈ ರೀತಿಯ ಉಪಕರಣಗಳನ್ನು ರೈತರಲ್ಲಿ ಜನಪ್ರಿಯ ಗೊಳಿಸಲು ಪ್ರತಿ ರೈತರಿಗೆ ರೂ.500–00 ಗಳಿಗೆ ಮೀರದಂತೆ ಶೇ.50ರ ರಿಯಾಯಿತಿ ನೀಡಲಾಗುತ್ತಿದೆ.

1994–95ನೇ ಸಾಲಿನಲ್ಲಿ 7500 ಕೃಷಿ ಉಪಕರಣ ಗಳನ್ನು ವಿತರಿಸಲು 15.81 ಲಕ್ಷ ರೂ.ಗಳನ್ನು ನಿಗದಿಪಡಿಸ ಲಾಗಿತ್ತು.

1995–96ರಲ್ಲಿ 2450 ವಿವಿಧ ಸುಧಾರಿತ ಕೃಷಿ ಉಪಕರಣಗಳನ್ನು ವಿತರಿಸಲು 8.47 ಲಕ್ಷ ರೂ.ಗಳ ಕಾರ್ಯ ಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

1994–95ನೇ ಸಾಲಿನಲ್ಲಿ ಭಾರತ ಸರ್ಕಾರವು, ರಿಯಾಯಿತಿ ದರದಲ್ಲಿ 200 ಸಣ್ಣ ಟ್ರ್ಯಾಕ್ಟರಗಳನ್ನು ವಿತರಿಸಲು 60 ಲಕ್ಷ ರೂ.ಗಳಷ್ಟನ್ನು ನಿಗದಿಪಡಿಸಲಾಗಿದೆ. ಈ ಸಣ್ಣ ಟ್ರ್ಯಾಕ್ಟರಗಳ ಮೇಲೆ 30,000 ರೂ.ಗಳಿಗೆ ಮಿತಿ ಗೊಳಿಸಿದಂತೆ ಶೇ.30ರ ರಿಯಾಯಿತಿಯನ್ನು ಪಡೆಯಲು, 6 –8 ಎಕರೆ ನಿರಂತರ ನೀರಾವರಿ ಮೂಲ ಇರುವ ರೈತರು ಅರ್ಹರಾಗಿರುತ್ತಾರೆ. ಆದರೆ ಭಾರತ ಸರ್ಕಾರದಿಂದ ಅಡಳಿತ





ಮುಂಜೂರಾತಿ ದೊರಕದ ಕಾರಣ ಈ ಕಾರ್ಯಕ್ರಮವನ್ನು ಜಾರಿಗೊಳಿಸಲು ಸಾಧ್ಯವಾಗಲಿಲ್ಲ.

1995–96ನೇ ಸಾಲಿನಲ್ಲಿ 60 ಲಕ್ಷ ರೂ.ಗಳ ಆರ್ಥಿ ಸಹಾಯದಿಂದ 200 ಸಣ್ಣ ಟ್ರ್ಯಾಕ್ಟರಗಳನ್ನು ಪೂರೈಸಲು ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

ಕೃಷಿ ವಿಸ್ತರಣಾ ಯೋಜನೆ:–

ವಿಶ್ವಬ್ಯಾಂಕ ನೆರವಿನ ರಾಷ್ಟ್ರೀಯ ಕೃಷಿ ವಿಸ್ತರಣಾ ಯೋಜನೆ–II 1992–93 ಸಾಲಿಗೆ ಅಂತ್ಯಗೊಂಡಿ 1994–95ರ ವರೆಗೆ ವಿವಿಧ ಘಟಕಗಳನ್ನೊಳಗೊಂಡಂತೆ ಇದನ್ನು ಮುಂದುವರಿಸಿದ್ದು, ಬಲಯುತ ವಿಸ್ತರಣೆ ಹಾಗೂ ಸಂಶೋ ಬೆಂಬಲವನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ನಡೆಸಿಕೊಂಡು ಹೋಗಲು ಮತ್ತು ಭೂಮಿ ಮತ್ತು ನೀರಿನ ಸಂಪನ್ಮೂ ಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಂಡು ಹೆಚ್ಚಿನ ಉತ್ಪಾ ಸಹಾಯಕವಾಗಿರುತ್ತದೆ. ಈ ಯೋಜನೆಯಡಿ ಆಚರಣೆಗೆ ತಂದ ತರಬೇತಿ ಮತ್ತು ಭೇಟಿ ಪದ್ಧತಿಯು ಕೃಷಿ ಲೋಕದಲ್ಲಿ ಮುಖ್ಯ ಬದಲಾವಣೆ ತಂದಿದ್ದು, ವಿವಿಧ ಕೃಷಿ ಹವಾಮಾನ ಸ್ಥಿತಿಗಳಿಗನುಗುಣವಾಗಿ ಹೆಚ್ಚಿನ ಪ್ರಮಾಣದಲ್ಲಿ ಆಧುನಿಕ ತಾಂತ್ರಿಕತೆಯ ಅಳವಡಿಕೆಯಲ್ಲಿ ನೆರವಾಗಿರುತ್ತದೆ.

ಈ ಯೋಜನೆಯಡಿ ಪ್ರಮುಖ ಕಾರ್ಯಕ್ರಮಗಳಾದ ಜಿಲ್ಲಾಮಟ್ಟದ ಕಾರ್ಯಾಗಾರಗಳು, ತಾಲ್ಲೂಕು ಮಟ್ಟದ ಪಾಕ್ಷಿಕ ತರಬೇತಿ ಕಾರ್ಯಕ್ರಮಗಳು, ಗ್ರಾಮಮಟ್ಟ ಕಾರ್ಯಕರ್ತರುಗಳ ನಿಗದಿತ ಭೇಟಿ, ವಸ್ತುಸ್ಥಿತಿ ವರದಿ, ರಾಷ್ಟ್ರೀಯ ಕೃಷಿ ಸಂಶೋಧನಾ ಕಾರ್ಯಾಗಾರಗಳು ಮುಂತಾದವುಗಳಿಗೆ ಹೆಚ್ಚಿನ ಒತ್ತು ನೀಡಲಾಗಿತ್ತು. ಏಕೆಂದರೆ ಇವುಗಳು ಇತ್ತೀಚಿನ ಆಧುನಿಕ ತಾಂತ್ರಿಕತೆಗಳ ವರ್ಗಾವಣೆಗೆ ಹಿಂದ

ಇದಂ ಸಾಧನಗಳಿಗಿಂತ ಉತ್ತಮ ಸಾಧನಗಳೆಂದು ಪರಿಗಣಿಸಲ್ಪಟ್ಟಿರುತ್ತವೆ.

1994—95ನೇ ಸಾಲಿನಲ್ಲಿ ಈ ಯೋಜನೆಗೆ ಒದಗಿಸಿದ 380·00 ಲಕ್ಷ ರೂ·ಗಳ ಪೈಕಿ 360·00 ಲಕ್ಷ ರೂ·ಗಳನ್ನು ವೆಚ್ಚ ಮಾಡಲಾಗಿದೆ ಹಾಗೂ 1995—96ನೇ ಸಾಲಿಗೆ 400·00 ಲಕ್ಷ ರೂ·ಗಳ ಅನುದಾನವನ್ನು ನಿಗದಿಪಡಿಸಿದೆ.

ರಾಷ್ಟ್ರೀಯ ಕೃಷಿ ವಿಸ್ತರಣಾ ಯೋಜನೆ—2ರ ಅಡಿಯಲ್ಲಿ 94—95ನೇ ಸಾಲಿನ ವಿವಿಧ ಘಟಕವಾರು ಸಾಧಿಸಿರುವ ಪ್ರಗತಿ ಮತ್ತು 95—96ನೇ ಸಾಲಿನ ಕಾರ್ಯಕ್ರಮಗಳ ವಿವರ ಕೆಳಗಿನಂತಿದೆ:—

(ಲಕ್ಷ ರೂ·ಗಳಲ್ಲಿ)

| ಕ್ರಮ ಸಂಖ್ಯೆ | ಘಟಕವಾರು | 1994—95ನೇ ಪರಿಷ್ಕೃತ ಅಂದಾಜು | | 1995—96ನೇ ಆಯವ್ಯಯ ಅಂದಾಜು |
|---|---|---|---|---|
| | | ನಿಗದಿ ಪಡಿಸಿದ ಅನುದಾನ | ಖರ್ಚಾದ ಹಣ | ಕಾರ್ಯಕ್ರಮ |
| 1· | ವೇತನ ಭತ್ಯೆಯ ಖರ್ಚು· | 140—00 | 145—00 | 165—00 |
| 2· | ಇತರೆ ವೆಚ್ಚಗಳು: (ಕ್ಷೇತ್ರ ಪ್ರಯೋಗ, ಪ್ರಚಾರ, ಪ್ರಸಾರ, ಇತರೆ) ಪೀಠೋಪಕರಣಗಳು (ದಿನಚರಿ ಹಾಗೂ ತರಬೇತಿ ಸಾಧನಗಳು) ಮತ್ತು ತರಬೇತಿ· | 60—00 | 60—00 | 65—00 |
| 3· | ವಾಹನಚಲನೆ ವೆಚ್ಚ | 80—00 | 60—00 | 70—00 |
| 4· | ಪ್ರವಾಸ ವೆಚ್ಚ | 20—00 | 15—00 | 20—00 |
| 5· | ಕಾಮಗಾರಿಕೆ | 80—00 | 80—00 | 80—00 |
| | ಒಟ್ಟು·· | 380—00 | 360—00 | 400—00 |

ತರಬೇತಿ, ಭೇಟಿ ಮತ್ತು ಪ್ರಾತ್ಯಕ್ಷಿಕೆ ಕಾರ್ಯಕ್ರಮ:—

1989ನೇ ಸಾಲಿನಲ್ಲಿ ರಾಜ್ಯದಲ್ಲಿ ಕಡಿಮೆ ಉತ್ಪಾದನಾ ತಾಲ್ಲೂಕುಗಳೆಂದು ಗುರುತಿಸಲ್ಪಟ್ಟ 20 ತಾಲ್ಲೂಕುಗಳಲ್ಲಿ ಜಾರಿಗೊಳಿಸಲಾದ ಹಸಿರುಕಿರಣ ಯೋಜನೆಯು ಉತ್ತೇಜಕರ ಫಲಿತಾಂಶ ನೀಡಿದ ಹಿನ್ನೆಲೆಯಲ್ಲಿ 1992–93ನೇ ಸಾಲಿನಿಂದ ಇದನ್ನು ಮತ್ತೆ 20 ತಾಲ್ಲೂಕುಗಳಿಗೆ ವಿಸ್ತರಿಸಿ, ಇದಕ್ಕೆ ತರಬೇತಿ, ಭೇಟಿ ಮತ್ತು ಪ್ರಾತ್ಯಕ್ಷಿಕೆ ಕಾರ್ಯಕ್ರಮ ಎಂಬ ಹೆಸರಿನಿಂದ ಜಾರಿಗೊಳಿಸಲಾಗುತ್ತಿದೆ. ಈ ಕಾರ್ಯಕ್ರಮದಡಿ ಪ್ರತಿ ಜಿಲ್ಲೆಯಲ್ಲಿ ಆಯ್ಕೆ ಮಾಡಲಾದ 2 ತಾಲ್ಲೂಕುಗಳಲ್ಲಿ ಬೆಳೆಯಲಾಗುವ ಪ್ರಮುಖ ಬೆಳೆಗಳ ಮೇಲೆ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಲಾಯಿತು. ಪ್ರತಿ ಪ್ರಾತ್ಯಕ್ಷಿಕೆಯು 5ರಿಂದ 10 ಹೆಕ್ಟೇರುಗಳ ಒತ್ತಟ್ಟಿನ ಕ್ಷೇತ್ರವಾಗಿರಬೇಕು ಹಾಗೂ ಇದರಲ್ಲಿ 5 ರೈತರಾದರೂ ಭಾಗವಹಿಸಿರಬೇಕು. ಇದರಡಿ ಉತ್ಪಾದನಾ ಕುಂಠಿತಕ್ಕೆ ಕಾರಣವಾದ ಅಂಶಗಳನ್ನು ಗುರುತಿಸಿ, ರೈತರು ತಮ್ಮ ಸಂಪನ್ಮೂಲಗಳಿಗೆ ಸೀಮಿತಗೊಂಡಂತೆ ಪರಿಣಾಮಕಾರಿ ಪಾಲ್ಗೊಳ್ಳುವಿಕೆಗೆ ಅನುವು ಮಾಡಲಾಗಿದೆ.

ಸಮಗ್ರ ಕೃಷಿ ಅಭಿವೃದ್ಧಿ ಯೋಜನೆ:—

ರಾಜ್ಯದಲ್ಲಿ ಕಳೆದ 15 ವರ್ಷಗಳಿಂದ ಕಾರ್ಯಾಚರಣೆಗೊಳಿಸಲಾದ ಕೃಷಿ ವಿಸ್ತರಣಾ ಯೋಜನೆ ಮತ್ತು ರಾಷ್ಟ್ರೀಯ ಕೃಷಿ ವಿಸ್ತರಣಾ ಯೋಜನೆಗಳ ಅನುಭವದ ಆಧಾರದ ಮೇಲೆ ವಿಸ್ತರಣಾ ಕಾರ್ಯಕರ್ತರಿಗೆ ಸಂಚಾರ ಸೌಲಭ್ಯ ಉತ್ತಮಗೊಳಿಸುವುದು ಹಾಗೂ ಮಧ್ಯಮ ಮತ್ತು ಕ್ಷೇತ್ರ ಮಟ್ಟದ ಕಾರ್ಯಕರ್ತರುಗಳ ತಾಂತ್ರಿಕ ಪರಿಣತಿಯನ್ನು ಹೆಚ್ಚಿಸಲು ಉನ್ನತ ವ್ಯಾಸಂಗಕ್ಕೆ ನಿಯೋಜಿಸುವುದಲ್ಲದೆ, ದೇಶದ ಒಳಗೆ ಹಾಗೂ ಹೊರದೇಶಗಳಲ್ಲಿ ವಿಶೇಷ ತರಬೇತಿಗಳಿಗೆ ನಿಯೋಜಿಸುವ

ಅವಶ್ಯಕತೆ ಕಂಡು ಬಂದಿದೆ. ಅಲ್ಲದೆ ಉತ್ತಮ ಗುಣಮಟ್ಟದ ಕೃಷಿ ಪರಿಕರಗಳಾದ ಪ್ರಮಾಣಿತ ಬೀಜ, ಸಸ್ಯ ಸಂರಕ್ಷಣಾ ಔಷಧಿ ಒದಗಿಸುವುದು, ಅತ್ಯಾವಶ್ಯಕ ಸೌಲಭ್ಯಗಳಿಂದ ಬೀಜ ಪರೀಕ್ಷೆ, ಲಘು ಪೋಷಕಾಂಶಗಳಿಗಾಗಿ ಮಣ್ಣಿನ ವಿಶ್ಲೇಷಣೆಯನ್ನು ಉತ್ತಮಪಡಿಸುವುದು, ಜೈವಿಕ ಗೊಬ್ಬರ ಉತ್ಪಾದಿಸುವುದು ಹಾಗೂ ಪ್ರಚಾರಗೊಳಿಸುವುದು ಅವಶ್ಯವೆನಿಸಿದೆ. ಇದಲ್ಲದೆ ಉತ್ಪಾದಕತೆ ಮತ್ತು ರಾಜ್ಯದ ಆಹಾರ ಉತ್ಪಾದನೆಯನ್ನು ಹೆಚ್ಚಿಸುವುದಕ್ಕಾಗಿ ಸಮಸ್ಯಾತ್ಮಕ ಮಣ್ಣುಗಳ ಸುಧಾರಣೆ ಮಾಡುವುದು ಅತ್ಯಾವಶ್ಯಕವಾಗಿ ಆಗಬೇಕಾಗಿದೆ.

ಆದ್ದರಿಂದ ಸಮಗ್ರ ಕೃಷಿ ಅಭಿವೃದ್ಧಿ ಯೋಜನೆ ಅಡಿ ರೂ.52.89 ಕೋಟಿಗಳ ಅನುದಾನ ಉಪಯೋಗಿಸಿ, ಕರ್ನಾಟಕ ರಾಜ್ಯ ಕೃಷಿ ಇಲಾಖೆಯು ಮೂಲಕ ಮೇಲ್ವಾಣಿಸಿದ ಕ್ಷೇತ್ರಗಳಲ್ಲಿ ಸುಧಾರಣೆಗಾಗಿ ಸೂಕ್ತ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಯೋಜಿಸಲಾಗಿದೆ. ಆದರೆ ಈ ಸುಧಾರಣಾ ಕಾರ್ಯಕ್ರಮಗಳಿಗೆ ಬೇಕಾಗುವ ಹಣಕಾಸು ರಾಜ್ಯದ ಸೀಮಿತ ಸಂಪನ್ಮೂಲಗಳಿಂದಾಗಿ ಸಾಕಾಗುವುದಿಲ್ಲವಾದ್ದರಿಂದ ವಿಶ್ವಬ್ಯಾಂಕಿನ ಆರ್ಥಿಕ ನೆರವನ್ನು ಕೋರಿ ಪ್ರಸ್ತಾವನೆಯನ್ನು ಭಾರತ ಸರ್ಕಾರದ ಮೂಲಕ ವಿಶ್ವಬ್ಯಾಂಕಿಗೆ ಕಳುಹಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. ವಿಶ್ವಬ್ಯಾಂಕಿನ ಅನುಮೋದನೆ ದೊರೆತ ನಂತರ ಐದು ವರ್ಷಗಳ ಅವಧಿಯು ಸಮಗ್ರ ಕೃಷಿ ಅಭಿವೃದ್ಧಿ ಯೋಜನೆಯನ್ನು ರಾಜ್ಯದಲ್ಲಿ ಕಾರ್ಯಾನುಚರಣೆಗೊಳಿಸಲಾಗುವುದು.

ನೂತನ ತಾಂತ್ರಿಕತೆಗಳನ್ನು ಅಳವಡಿಸಿಕೊಂಡು ಗ್ರಾಮ ಪಂಚಾಯತಿ ಮಟ್ಟದಲ್ಲಿ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸುವ

ಕಾರ್ಯಕ್ರಮ:—

ರಾಜ್ಯದ ಎರಡೂ ಕೃಷಿ ವಿಶ್ವವಿದ್ಯಾನಿಲಯಗಳು ಕಳೆದ ಐದು ವರ್ಷಗಳಿಂದೀಚೆಗೆ ರಾಜ್ಯದಲ್ಲಿ ಬೆಳೆಯಲಾಗುತ್ತಿರುವ ಪ್ರಮುಖ ಬೆಳೆಗಳ ಮೇಲೆ ರೂಪಿಸಿರುವ ನೂತನ ತಾಂತ್ರಿಕತೆಗಳನ್ನು ಬಳಸಿಕೊಂಡು ಬೆಳೆಗಳನ್ನು ಬೆಳೆದಲ್ಲಿ ಉತ್ಪಾದನೆಯನ್ನು ಈಗಿರುವ ಮಟ್ಟಕ್ಕಿಂತ ಹೆಚ್ಚಿಸಬಹುದು ಎಂಬುದನ್ನು ಅತಿ ಹೆಚ್ಚು ರೈತರಿಗೆ ಶೀಘ್ರವಾಗಿ ನಿರೂಪಿಸುವ ಸಲುವಾಗಿ ರಾಜ್ಯ ಸರ್ಕಾರವು 1994–95ನೇ ಸಾಲಿನಲ್ಲಿ ನೂತನವಾದ ಕಾರ್ಯಕ್ರಮ ಒಂದನ್ನು ರೂಪಿಸಿದೆ. ಈ ಕಾರ್ಯಕ್ರಮವನ್ನು ಕಡಿಮೆ ಉತ್ಪಾದನಾ ತಾಲ್ಲೂಕೆಂದು ಪ್ರಥಮ ಹಂತದಲ್ಲಿ ಗುರುತಿಸಲಾದ 19 ತಾಲ್ಲೂಕುಗಳಲ್ಲಿ ಕೃಷಿ ಸಹಾಯಕರುಗಳು ಇರುವ 459 ಗ್ರಾಮ ಪಂಚಾಯ್ತಿಗಳಲ್ಲಿ ಪ್ರತಿ ಪಂಚಾಯಿತಿ ಕ್ಷೇತ್ರ ಒಂದಕ್ಕೆ 8 ಪ್ರಾತ್ಯಕ್ಷಿಕೆಗಳಂತೆ ಒಟ್ಟು 3672 ನೂತನ ತಾಂತ್ರಿಕತೆಗಳ ಪ್ರಾತ್ಯಕ್ಷಿಕೆಗಳನ್ನು ತೆಗೆದುಕೊಳ್ಳುವ ಗುರಿಯುಳ್ಳದು, 3000 ಪ್ರಾತ್ಯಕ್ಷಿಕೆಗಳನ್ನು 'ಏರ್ಪಡಿಸಲಾಗಿದೆ. ಈ ಕಾರ್ಯಕ್ರಮದ ಭೌತಿಕ ಹಾಗೂ ಆರ್ಥಿಕ ಗುರಿಗಳ ವಿವರಗಳು ಈ ಕೆಳಕಂಡಂತಿವೆ:—

| ಕ್ರಮ ಸಂಖ್ಯೆ | ಕಾರ್ಯಕ್ರಮದ ವಿವರ | ಭೌತಿಕ | 1994-95ನೇ ಸಾಲಿನ ವೆಚ್ಚ (ರೂ.ಗಳಲ್ಲಿ) | |
|---|---|---|---|---|
| | | | ಆರ್ಥಿಕ ಗುರಿ | ಸಾಧನೆ |
| 1. | ಅ) ಭತ್ತ, ನೆಲಗಡಲೆ, ಸೂರ್ಯಕಾಂತಿ, ಸಂಕರ ಜೋಳ, ಮುಸುಕಿನ ಜೋಳ, ತೊಗರಿ, ಕಡಲೆ, ಸೋಯಾ ಅವರೆ ಪ್ರಾತ್ಯಕ್ಷಿಕೆಗಳು (1 ಎಕರೆ ಪ್ರಾತ್ಯಕ್ಷಿಕೆಯೊಂದಕ್ಕೆ ರೂ.2000 ಗಳಂತೆ).. | 2109 | 42,18,000 | 37,31,032-54 |
| | ಆ) ರಾಗಿ, ಸ್ಥಳೀಯ ಜೋಳ, ಹಿಂಗಾರಿ ಜೋಳ ಹಾಗೂ ಸಜ್ಜೆ ಬೆಳೆಯ ಪ್ರಾತ್ಯಕ್ಷಿಕೆಗಳು (1 ಎಕರೆ ಪ್ರಾತ್ಯಕ್ಷಿಕೆಯೊಂದಕ್ಕೆ ರೂ.1000 ಗಳಂತೆ).. | 1563 | 15,63,000 | |
| 2. | ಪ್ರಚಾರ:ಪ್ರಸಾರ ಹಾಗೂ ಕ್ಷೇತ್ರೋತ್ಸವಗಳಿಗಾಗಿ (ಪ್ರತಿ ಗ್ರಾಮ ಪಂಚಾಯತಿಗೆ ರೂ.3000 ಗಳಂತೆ) (ಪಂಚಾಯತಿಗಳು) .. | 459 | 13,77,000 | 12,54,624 |
| 3. | ಪ್ರಾತ್ಯಕ್ಷಿಕೆಗಳ ದಾಖಲು ಪುಸ್ತಕ ಮುದ್ರಣ, ಅಧಿಕಾರಿಗಳಿಗೆ ತರಬೇತಿ ಮುಂತಾದ ವೆಚ್ಚಕ್ಕಾಗಿ. .. | — | .3,42,000 | 5,000 |
| | ಒಟ್ಟು .. | | 75,00,000 | 49,90,656-54 |

**ರಾಷ್ಟ್ರೀಯ ಕೃಷಿ ವಿಸ್ತರಣಾ ಯೋಜನೆಯಡಿಯಲ್ಲಿ ಕಾಮಗಾರಿಗಳು:—**

ಈ ಯೋಜನೆಯನ್ನು ವಿಶ್ವಬ್ಯಾಂಕ ನೆರವಿನೊಂದಿಗೆ 1985ರಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಕಟ್ಟಡ, ಕಾಮಗಾರಿಗಳ ಕೆಲಸವು ಯೋಜನೆಯ ಒಂದು ಮುಖ್ಯ ಘಟಕವಾಗಿರುತ್ತದೆ.

ಆಡಳಿತಾತ್ಮಕ ಮಂಜೂರಾತಿಯನ್ನು 284 ಕೃಷಿ ಸಹಾಯಕ ಮತ್ತು 102 ಸಹಾಯಕ ಕೃಷಿ ಅಧಿಕಾರಿಗಳ ವಸತಿ ಗೃಹಗಳಿಗೆ ಮತ್ತು 57 ಸಹಾಯಕ ಕೃಷಿ ನಿರ್ದೇಶಕರ, 4 ಪ್ರಧಾನ ಕೃಷಿ ಅಧಿಕಾರಿಗಳು ಮತ್ತು 3 ಜಂಟಿ ಕೃಷಿ ನಿರ್ದೇಶಕರುಗಳ ಕಾರ್ಯಾಲಯದ ಕಟ್ಟಡಗಳಿಗೆ ನೀಡಲಾಗಿತ್ತು. ಸಾಮಾನ್ಯವಾಗಿ ಎಲ್ಲಾ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ.

**ಇತರೆ ಕಟ್ಟಡ ಕಾಮಗಾರಿಗಳು:—**

1994—95ನೇ ಸಾಲಿನಲ್ಲಿ ವಿವಿಧ ಕಾಮಗಾರಿಗಳಿಗಾಗಿ 80 ಲಕ್ಷ ರೂ.ಗಳನ್ನು ನಿಗದಿಪಡಿಸಿದ್ದು, ಕೆಳಗಿನಂತೆ ಬಿಡುಗಡೆ ಮಾಡಲಾಗಿದೆ.

(ಲಕ್ಷ ರೂ.ಗಳಲ್ಲಿ)

| | | |
|---|---|---|
| 1) | 5 ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಕಟ್ಟಡದ ನಿರ್ಮಾಣಕ್ಕಾಗಿ ಭೂಸೇನಾ ನಿಗಮಕ್ಕೆ ಬಿಡುಗಡೆ ಮಾಡಲಾದ ಅನುದಾನ .. | 20.00 |
| 2) | ಕೃಷಿ ನಿರ್ದೇಶನಾಲಯದಲ್ಲಿನ ನಿರ್ದೇಶಕರ ಕೊಠಡಿಯ ನವೀಕರಣಕ್ಕಾಗಿ ಭೂಸೇನಾ ನಿಗಮಕ್ಕೆ ಬಿಡುಗಡೆ ಮಾಡಲಾದ ಅನುದಾನ.. | 1.21603 |
| 3) | ಕೃಷಿ ನಿರ್ದೇಶನಾಲಯದಲ್ಲಿಯ ಕಲರ ಲ್ಯಾಬಿಗೆ ಹವಾ ನಿಯಂತ್ರಣ ಅಳವಡಿಸಲು ಭೂಸೇನಾ ನಿಗಮಕ್ಕೆ ಬಿಡುಗಡೆ ಮಾಡಲಾದ ಅನುದಾನ .. | 0.85 |

(ಲಕ್ಷ ರೂ.ಗಳು)

4) ಕೃಷಿ ನಿರ್ದೇಶನಾಲಯದಲ್ಲಿಯ ಸಸ್ಯ ಸಂರಕ್ಷಣೆ ಮತ್ತು ರಾಜ್ಯ ಮಣ್ಣು ಸರ್ವೇಕ್ಷೆ ಕಟ್ಟಡಗಳ ಮಧ್ಯೆ ಸಂಪರ್ಕ ಸೇತುವೆ ನಿರ್ಮಿಸಲು ಲೋಕೋಪಯೋಗಿ ಇಲಾಖೆಗೆ ಬಿಡುಗಡೆ ಮಾಡಲಾದ ಅನುದಾನ.. 1.75

5) 8 ಹೊಸ ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಕಟ್ಟಡದ ನಿರ್ಮಾಣಕ್ಕಾಗಿ ಭೂಸೇನಾ ನಿಗಮಕ್ಕೆ ಬಿಡುಗಡೆ ಮಾಡಲಾದ ಅನುದಾನ.. 26.545

6) ಬೆಂಗಳೂರು ಬನಶಂಕರಿಯಲ್ಲಿ ನಿರ್ಮಾಣಗೊಂಡ ಕೃಷಿ ಸಂಕೀರ್ಣಕ್ಕೆ ನೀರಿನ ಪೂರೈಕೆ ಒದಗಿಸಲು ಬಿಡುಗಡೆ ಮಾಡಲಾದ ಅನುದಾನ.. 2.4469

7) ಮಂಡ್ಯ ಐಜಿಇಟಿಸಿಯಲ್ಲಿನ ಕಟ್ಟಡಗಳ ಮಾರ್ಪಾಡು ಮತ್ತು ನವೀಕರಣಕ್ಕೆ ಉಪಯೋಗಿಸಲಾದ ಅನುದಾನ .. 1.09

8) ರಾಕೃವಿ ಯೋಜನೆಯಲ್ಲಿನ ಅಪೂರ್ಣಗೊಂಡ ಕಟ್ಟಡಗಳನ್ನು ಪೂರ್ಣಗೊಳಿಸಲು ಲೋಕೋಪಯೋಗಿ ಇಲಾಖೆಗೆ ಬಿಡುಗಡೆ ಮಾಡಲಾದ ಅನುದಾನ .. 23.15

9) ಮಾಗಡಿಯಲ್ಲಿನ ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಕಟ್ಟಡಕ್ಕೆ ಸಂಪರ್ಕ ರಸ್ತೆ ಮತ್ತು ಕಾಂಪೌಂಡ ನಿರ್ಮಿಸಲು ಜಿಲ್ಲಾ ಪರಿಷತ್ತಿಗೆ ಬಿಡುಗಡೆ ಮಾಡಲಾದ ಅನುದಾನ.. 2.95

1995-96ನೇ ಸಾಲಿನಲ್ಲಿಯ ಕಾರ್ಯಕ್ರಮ:-

ಈ ಸಾಲಿನಲ್ಲಿ ಕಟ್ಟಡ ಕಾಮಗಾರಿಗಳಿಗಾಗಿ 80.00 ಲಕ್ಷ ರೂ.ಗಳನ್ನು ಒದಗಿಸಲು ಯೋಜಿಸಲಾಗಿದ್ದು, ಅದನ್ನು ಈ ಕೆಳಕಂಡಂತೆ ಉಪಯೋಗಿಸಲು ಯೋಜಿಸಲಾಗಿದೆ.

(ಲಕ್ಷ ರೂ.ಗಳು)

1) 93–94ನೇ ಸಾಲಿನಲ್ಲಿ ಮಂಜೂರಾತಿ ನೀಡಲಾದ 5 ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಕಟ್ಟಡಗಳ ನಿರ್ಮಾಣಕ್ಕಾಗಿ ಭೂಸೇನಾ ನಿಗಮಕ್ಕೆ ಬಿಡುಗಡೆ ಮಾಡಬೇಕಾಗಿರುವ ಬಾಕಿ ಮೊತ್ತ .. 13.00

2) 94–95ನೇ ಸಾಲಿನಲ್ಲಿ 8 ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಕಟ್ಟಡಗಳ ನಿರ್ಮಾಣಕ್ಕಾಗಿ ಭೂಸೇನಾ ನಿಗಮಕ್ಕೆ ಬಿಡುಗಡೆ ಮಾಡಬಹುದಾದ ಅನುದಾನ .. 15.00

3) 95–96ನೇ ಸಾಲಿನಲ್ಲಿ 8 ಹೊಸ ಸಹಾಯಕ ಕೃಷಿ ನಿರ್ದೇಶಕರ ಕಛೇರಿ ಕಟ್ಟಡಗಳ ನಿರ್ಮಾಣಕ್ಕೆ ಮಂಜೂರಾತಿ ನೀಡಲು ಮುಡುಪಾಗಿಡಬೇಕಾಗಿರುವ ಅನುದಾನದ ಮೊತ್ತ .. 30.00

4) ಕೃಷಿ ವಿಸ್ತರಣಾ ಯೋಜನೆ ಹಾಗೂ ರಾಷ್ಟ್ರೀಯ ಕೃಷಿ ವಿಸ್ತರಣೆ ಯೋಜನೆ ಅಡಿ ಅಪೂರ್ಣಗೊಂಡ ಕಟ್ಟಡಗಳನ್ನು ಪೂರ್ಣಗೊಳಿಸಲು ಲೋಕೋಪಯೋಗಿ ಇಲಾಖೆಗೆ ಬಿಡುಗಡೆ ಮಾಡಲು ಉದ್ದೇಶಿಸಲಾದ ಮೊತ್ತ .. 7.00

5) ಈಗಿರುವ ಕಛೇರಿ ಕಟ್ಟಡಗಳಿಗೆ ಅವಶ್ಯವಿರುವ ಸೌಲಭ್ಯಗಳನ್ನು ಒದಗಿಸಲು ಮತ್ತು ಕಛೇರಿ ವಿಸ್ತರಣೆಗಳಿಗಾಗಿ ಉಪಯೋಗಿಸಲು ಯೋಜನೆ ಹಾಕಿಕೊಂಡಿರುವ ಮೊತ್ತ .. 15.00

ಒಟ್ಟು .. 80.00

ಕೃಷಿ ಅಭಿವೃದ್ಧಿ ಕೇಂದ್ರಗಳು:—

ರಾಜ್ಯದ ತ್ಯಾವಣಗಿ, ಕೊಣ್ಣೂರು, ಧಾರವಾಡ ಮ. ಧಡೆಸುಗೂರುಗಳಲ್ಲಿ ಸ್ಥಾಪಿತವಾಗಿರುವ ನಾಲ್ಕು ಕೃಷಿ ಅಭಿವೃ ಕೇಂದ್ರಗಳು, ನಿಶ್ಚಿತ ಪ್ರದೇಶಕ್ಕೆ ಬೆಳೆ ಪದ್ಧತಿ, ಅಧ್ಯಯನ, ಕ್ಷೇತ್ರ ಪ್ರಯೋಗಗಳನ್ನು ಏರ್ಪಡಿಸುವುದು, ರೈತರಿಗೆ ತರಬೇ

ಮತ್ತು ಸಲಹೆಗಳನ್ನು ನೀಡುವುದು ಮತ್ತು ಬಿತ್ತನೆ ಬೀಜ ದ್ವಿಗುಣಗೊಳಿಸುವಿಕೆ, ಮುಂತಾದ ಕಾರ್ಯ ಕ್ರಮಗಳನ್ನು ಕಾರ್ಯ ಗೊಳಿಸುತ್ತವೆ. 1994–95ನೇ ಮುಂಗಾರು ಮತ್ತು ಹಿಂಗಾರು ಹಂಗಾಮುಗಳಲ್ಲಿ ಕ್ರಮವಾಗಿ 75 ಮತ್ತು 95 ಹೆಕ್ಟೇರ ಪ್ರದೇಶಗಳಲ್ಲಿ ಬೀಜೋತ್ಪಾದನೆ ಕಾರ್ಯಕ್ರಮವನ್ನು ಏರ್ಪಡಿಸ ಲಾಗಿದೆ. 1994–95ನೇ ಸಾಲಿನಲ್ಲಿ 21.96 ಲಕ್ಷ ರೂ.ಗಳ ಪ್ರತಿಯಾಗಿ ಸಿಬ್ಬಂದಿ ವೆಚ್ಚವೂ ಸೇರಿ 21.77 ಲಕ್ಷ ರೂ.ಗಳು ವೆಚ್ಚವಾಗಿರುತ್ತವೆ. 1995–96ರ ಸಾಲಿನಲ್ಲಿ ಸುಧಾರಿತ ಮತ್ತು ಸಂಕರಣಾ ತಳಿಗಳ ಉತ್ಪಾದನೆ ಮತ್ತು ದ್ವಿಗುಣಗೊಳಿಸುವಿಕೆ ಯನ್ನು 236 ಹೆಕ್ಟೇರಗಳಲ್ಲಿ ಮಾಡಲಾಗುವುದು.

ಸಹಜ ಕೃಷಿ ಪದ್ಧತಿ ಯೋಜನೆ:–

ಈ ಯೋಜನೆಯನ್ನು ನಿಗದಿಪಡಿಸಿದ 30.00 ಲಕ್ಷ ರೂ.ಗಳಲ್ಲಿ, 23.21 ಲಕ್ಷ ರೂ.ಗಳನ್ನು ವೆಚ್ಚ ಮಾಡಿ ಕಾರ್ಯಗತಗೊಳಿಸಲಾಯಿತು.

ನೈಸರ್ಗಿಕ ಕೃಷಿ ಕ್ರಮಗಳನ್ನು ಅಳವಡಿಸಿ ಒಂದು ಹೆಕ್ಟೇರ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಲಾಗುತ್ತಿದೆ. ಅಲ್ಲದೆ ರೈತ ಸಮುದಾಯಕ್ಕೆ ಸಾವಯುವ ಗೊಬ್ಬರದ ಬಳಕೆಯ ಮಹತ್ವ, ಕೀಟಗಳನ್ನು ನಿಯಂತ್ರಿಸಲು ಸಸ್ಯಾಧಾರಿತ ಕೀಟ ನಾಶಕಗಳ ಬಳಕೆಯನ್ನು ಉಲ್ಲೇಖಿಸುವುದು, ಹಸಿರೆಲೆ, ನೀಲಿ ಹಸಿರು ಪಾಚಿ ಗೊಬ್ಬರಗಳ ಬಳಕೆಯನ್ನು ಪ್ರೋತ್ಸಾಹಿಸು ವುದು ಹಾಗೂ ರೈಜೋಬಿಯಂ, ಅಜಟೋಬ್ಯಾಕ್ಟರ ಹಾಗೂ ಅಜೋಸ್ಪೈರಿಲಂ ಅಣುಜೀವಿಗಳ ಬಳಕೆಯ ಉತ್ತೇಜನ ಕಾರ್ಯ ಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಅಲ್ಲದೆ ಕೃಷಿ ವಿಶ್ವ ವಿದ್ಯಾನಿಲಯಗಳಿಗೆ ನೈಜ ಕೃಷಿ ಪದ್ಧತಿಯಲ್ಲಿ ಸಂಶೋಧನೆ ಕೈಗೊಳ್ಳಲು ತಲಾ 2.5 ಲಕ್ಷ ರೂ.ಗಳ ಅನುದಾನವನ್ನು ಕಾದಿರಿಸಲಾಗಿದೆ.

ಈ ಯೋಜನೆಯನ್ನು 1995–96ನೇ ಸಾಲಿನಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿಯೂ 30.00 ಲಕ್ಷ ರೂ.ಗಳ ಅನುದಾನದೊಂದಿಗೆ ಅನುಷ್ಠಾನಗೊಳಿಸಲಾಗುವುದು.

<u>ಕ್ಷೇತ್ರ ಪ್ರಯೋಗಗಳು</u>:–

1994–95ನೇ ಸಾಲಿನಲ್ಲಿ 1985 ಕ್ಷೇತ್ರ ಪ್ರಯೋ ಗಗಳನ್ನು 61,950 ರೂ.ಗಳ ವೆಚ್ಚದಲ್ಲಿ ಏರ್ಪಡಿಸುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದ್ದು, 1239 ಪ್ರಯೋಗಗಳನ್ನು ಏರ್ಪಡಿಸಲಾಗಿದೆ. 1995–96ನೇ ಸಾಲಿನಲ್ಲಿ 1148 ಕ್ಷೇತ್ರ ಪ್ರಯೋಗಗಳನ್ನು 57,400 ರೂ.ಗಳ ವೆಚ್ಚದಲ್ಲಿ ಏರ್ಪಡಿಸ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ.

<u>ರೈತರಿಗೆ, ಯುವಕ ರೈತರಿಗೆ ಮತ್ತು ರೈತ ಮಹಿಳೆಯರಿಗೆ ತರಬೇತಿ ಕಾರ್ಯಕ್ರಮ</u>:–

ರೈತರಿಗೆ, ರೈತ ಮಹಿಳೆಯರಿಗೆ ಮತ್ತು ಯುವಕ ರೈತರಿಗೆ ಪ್ರಾಯೋಗಿಕವಾಗಿ ತರಬೇತಿಯನ್ನು ನೀಡುವುದು ಇಲಾಖೆಯ ಮುಖ್ಯ ಚಟುವಟಿಕೆಯಾಗಿರುತ್ತದೆ. ಇದಕ್ಕೋ ಇಲಾಖೆಯು ರಾಜ್ಯದ ವಿವಿಧ ಭಾಗಗಳಲ್ಲಿ 5 ಗ್ರಾಮೀಣ ತರಬೇ ಕೇಂದ್ರಗಳು, 21 ಕೃಷಿ ಪಾಠಶಾಲೆಗಳು ಮತ್ತು 13 ರೈತರ ತರಬೇತಿ ಮತ್ತು ಶಿಕ್ಷಣ ಕೇಂದ್ರಗಳನ್ನು ಹಾಗೂ 3 ಭಾರತ–ಜಪಾನ ಕೃಷಿ ವಿಸ್ತರಣಾ ತರಬೇತಿ ಕೇಂದ್ರಗಳನ್ನು ನಿರ್ವಹಿಸುತ್ತಿ

<u>ಗ್ರಾಮೀಣ ಅಭಿವೃದ್ಧಿ ತರಬೇತಿ ಕೇಂದ್ರಗಳು</u>:–

ರಾಜ್ಯ ಕೃಷಿ ಇಲಾಖೆಯು 5 ಗ್ರಾಮೀಣ ಅಭಿವೃದ್ಧಿ ಕೇಂದ್ರಗಳನ್ನು ಮಂಡ್ಯ, ಧಾರವಾಡ, ಕೂಡಿಗೆ, ಗಂಗಾವತಿ ವ ಬೆಳ್ತಂಗಡಿಗಳಲ್ಲಿ ಸ್ಥಾಪಿಸಿರುತ್ತದೆ. ಕೃಷಿ ಸಹಾಯಕರಿಗೆ ಸೇ ಪೂರ್ವ ತರಬೇತಿ ಜೊತೆಗೆ ರೈತರಿಗೆ, ರೈತ ಮಹಿಳೆಯರಿಗೆ

ಮತ್ತು ಅಂಗನವಾಡಿ ಕಾರ್ಯಕರ್ತೆಯರಿಗೆ ತರಬೇತಿ ನೀಡಲು ಬೇಕಾಗುವ ಎಲ್ಲಾ ಸೌಲಭ್ಯಗಳು ಈ ಸಂಸ್ಥೆಗಳಲ್ಲಿ ದೊರೆಯುತ್ತವೆ.

1994–95ನೇ ಸಾಲಿಗೆ ವಿವಿಧ ಕೇಂದ್ರಗಳ ಕಾರ್ಯಕ್ರಮ ಮತ್ತು ಸಾಧಿಸಿದ ಪ್ರಗತಿ ಹಾಗೂ 1995–96ರ ಸಾಲಿನ ಕಾರ್ಯಕ್ರಮಗಳು ಈ ಕೆಳಗಿನಂತಿವೆ:—

1. ಗ್ರಾಮೀಣ ಅಭಿವೃದ್ಧಿ ತರಬೇತಿ ಕೇಂದ್ರಗಳು:

| ಕ್ರಮ ಸಂಖ್ಯೆ | ತರಬೇತಿಗಳ ವಿವರ | 1994–95 | | | | 1995–96ನೇ ಸಾಲಿನ ಕಾರ್ಯಕ್ರಮ | |
|---|---|---|---|---|---|---|---|
| | | ತರಬೇತಿಗಳ ಸಂಖ್ಯೆ | ತರಬೇತಿ ಪಡೆಯಬೇಕಾದವರ ಸಂಖ್ಯೆ | ತರಬೇತಿಗಳ ಸಂಖ್ಯೆ | ತರಬೇತಿ ಪಡೆದವರ | ತರಬೇತಿ ಸಂಖ್ಯೆ | ತರಬೇತಿ ಪಡೆಯಬೇಕಾದವರ ಸಂಖ್ಯೆ |
| 1 | 2 | 3 | 4 | 5 | 6 | 7 | 8 |
| ಎ. | ರಾಷ್ಟ್ರೀಯ ಕೃಷಿ ವಿಸ್ತರಣಾ ಯೋಜನೆಯಡಿಯಲ್ಲಿ ತರಬೇತಿಗಳು | | | | | | |
| 1. | ಕೃಷಿ ಸಹಾಯಕರಿಗೆ ಒಂದು ತಿಂಗಳ ಪುನಃಶ್ಚೇತನ ತರಬೇತಿ | 25 | 1000 | 18 | 408 | 25 | 1000 |
| ಬಿ) | ವ್ಯಕ್ತಿಗತ ತರಬೇತಿಗಳು: | | | | | | |
| 1. | ಕೃಷಿ ಮತ್ತು ಕೃಷಿಗೆ ಸಂಬಂಧಿತ ವಿಷಯಗಳಲ್ಲಿ ರೈತರಿಗೆ ಒಂದು ದಿನದ ಕೃಷಿ ಸಂಚಾರಿ ತರಬೇತಿ ಶಿಬಿರಗಳು | 250 | 10000 | 158 | 6115 | 250 | 10000 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 2. | ಧಾರವಾಡ ಕೇಂದ್ರದಲ್ಲಿ ರೈತರಿಗೆ [illegible] ಮತ್ತು ನೀರು ನಿರ್ವಹಣೆಯಲ್ಲಿ 7 ದಿನಗಳ ತರಬೇತಿ | – | – | – | – | – | – |
| ಆ) | ಗೃಹ ವಿಜ್ಞಾನ ವಿಭಾಗ ತರಬೇತಿಗಳು: (ಗಂಗಾವತಿ, ಧಾರವಾಡ, [illegible] ಕೇಂದ್ರಗಳಲ್ಲಿ ಮಾತ್ರ) | | | | | | |
| 1. | ರೈತ ಮಹಿಳೆಯರಿಗೆ ಒಂದು ದಿನದ ಸಂಚಾರಿ ತರಬೇತಿ ಶಿಬಿರಗಳು | 125 | 5000 | 54 | 2188 | 125 | 5000 |
| 2. | ಅಂಗನವಾಡಿ ಕಾರ್ಯಕರ್ತೆಯರಿಗೆ ಮೂರು ತಿಂಗಳ ತರಬೇತಿ | 3 | 135 | 3 | 136 | 3 | 100 |
| 3. | ಅಂಗನವಾಡಿ ಕಾರ್ಯಕರ್ತೆಯರ 8 ದಿನಗಳ ಓರಿಯಂಟೇಶನ್ ತರಬೇತಿ | 2 | 100 | 2 | 94 | 2 | 100 |
| | ಆರ್ಥಿಕ (ಲಕ್ಷ ರೂ.ಗಳಲ್ಲಿ) | 71.74 | | 93.64 | | 100.00 (ತಾತ್ಕಾಲಿಕ) | |

2. ಭಾರತ – ಜಪಾನ್ ಕೃಷಿ ವಿಸ್ತರಣಾ ತರಬೇತಿ ಕೇಂದ್ರಗಳು:

ಭಾರತ – ಜಪಾನ್ ಕೃಷಿ ವಿಸ್ತರಣಾ ತರಬೇತಿ ಕೇಂದ್ರಗಳು ಮಂಡ್ಯ, ಬೆಳ್ತಂಗಡಿ
ರಾಜ್ಯದಲ್ಲಿ ಮೂರು ಭಾರತ – ಜಪಾನ್ ಕೃಷಿ ವಿಸ್ತರಣಾ ತರಬೇತಿ ಕೇಂದ್ರಗಳು ಈ ಕೇಂದ್ರಗಳಲ್ಲಿ ಪ್ರಸ್ತುತ ಸಾಲಿನಲ್ಲಿ
ಮತ್ತು ಕುಮಟಾಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಈ ಕೆಳಗಿನಂತಿದೆ:
ಸಾಧಿಸಿರುವ ಪ್ರಗತಿ ಮತ್ತು 1995–96ನೇ ಸಾಲಿನ ಕಾರ್ಯಕ್ರಮ

| ಕ್ರಮ ಸಂಖ್ಯೆ | ತರಬೇತಿಗಳ ವಿವರ | 1994–95 ಗುರಿ | | ಸಾಧನೆ | | 1995–96ನೇ ಸಾಲಿಗೆ ಕಾರ್ಯಕ್ರಮ | |
|---|---|---|---|---|---|---|---|
| | | ತರಬೇತಿಗಳ ಸಂಖ್ಯೆ | ತರಬೇತಿ ಪಡೆಯುವವರ | ತರಬೇತಿಗಳ ಸಂಖ್ಯೆ | ತರಬೇತಿ ಪಡೆದವರ ಸಂಖ್ಯೆ | ತರಬೇತಿಗಳ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ |
| 1 | 2 | 3 | 4 | 5 | 6 | 7 | 8 |
| ಅ) | ಮಂಡ್ಯ ಕೇಂದ್ರ | | | | | | |
| | ಭೌತಿಕ | | | | | | |
| 1. | ಸಹಾಯಕ ಕೃಷಿ ಅಧಿಕಾರಿಗಳಿಗೆ ಸುಧಾರಿತ ಬತ್ತದ ಬೇಸಾಯದ ತಾಂತ್ರಿಕತೆಗಳಲ್ಲಿ 2 ತಿಂಗಳ ದೀರ್ಘಾವಧಿ ತರಬೇತಿ | 2 | 60 | 2 | 21 | 2 | 60 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 2. | ರೈತರಿಗೆ ಉಳುಮೆ ಯಂತ್ರದಲ್ಲಿ 15 ದಿವಸಗಳ ತರಬೇತಿ | 6 | 120 | 2 | 22 | 6 | 120 |
| 3. | ಕೃಷಿಪಾಠಶಾಲೆಯ ಶಿಕ್ಷಣಾರ್ಥಿಗಳಿಗೆ ಉಳುಮೆ ಯಂತ್ರದಲ್ಲಿ 6 ದಿನಗಳ ತರಬೇತಿ | 24 | — | 17 | 365 | 24 | — |
| 4. | ಪ್ರಗತಿಪರ ರೈತರಿಗೆ ಸುಧಾರಿತ ಬತ್ತದ ಬೇಸಾಯ ತಾಂತ್ರಿಕತೆಗಳಲ್ಲಿ ಆರು ದಿವಸಗಳ ತರಬೇತಿ | 6 | 120 | 5 | 52 | 6 | 120 |
| 5. | ಸಹಾಯಕ ಕೃಷಿ ಅಧಿಕಾರಿಗಳಿಗೆ 5 ದಿವಸಗಳ ಅಲ್ಪಾವಧಿ ತರಬೇತಿ | 3 | 60 | 3 | 29 | 3 | 60 |
| 6. | ಪ್ರಗತಿಪರ ರೈತರಿಗೆ ಸಂಚಾರಿ ತರಬೇತಿ ಆರ್ಥಿಕ (ಲಕ್ಷ ರೂ.ಗಳಲ್ಲಿ) | 13.38 | | 13.31 | | 20.00 | |
| ಆ. | **ಬೆಳ್ತಂಗಡಿ** | | | | | | |
| 1. | ಪ್ರಗತಿಪರ ರೈತರಿಗೆ ಬತ್ತದ ಬೇಸಾಯದ ತಾಂತ್ರಿಕತೆಗಳಲ್ಲಿ 6 ದಿವಸಗಳ ತರಬೇತಿ | 12 | 240 | 12 | 120 | - | — |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 2. | ರೈತರಿಗೆ ಉಳುಮೆ ಯಂತ್ರಗಳಲ್ಲಿ 15 ದಿನಗಳ ತರಬೇತಿ | 4 | 80 | 4 | 41 | 4 | 80 |
| 3. | ಸಹಾಯಕ ಕೃಷಿ ಅಧಿಕಾರಿ: ಕೃಷಿ ಸಹಾಯಕರಿಗೆ ಕೃಷಿ ಯಂತ್ರೋಪಕರಣಗಳಲ್ಲಿ 3 ದಿನಗಳ ತರಬೇತಿ | 4 | 80 | 4 | 29 | 4 | 80 |
| 4. | ಕೃಷಿ ಪಾಠಶಾಲೆಯ ಶಿಕ್ಷಣಾರ್ಥಿಗಳಿಗೆ 4 ದಿನಗಳ ತರಬೇತಿ | 7 | 350 | 8 | 37 | 7 | 350 |
| | ಆರ್ಥಿಕ (ಲಕ್ಷ ರೂ.ಗಳಲ್ಲಿ) | 4.90 | | 2.75 | | 10.00 | |
| ೨. | <u>ಕುಮಟಾ ಉಪ ಕೇಂದ್ರ</u> | | | | | | |
| | <u>ಭೌತಿಕ</u> | | | | | | |
| 1. | ಪ್ರಗತಿಪರ ರೈತರಿಗೆ ಆಧುನಿಕ ಬೇಸಾಯದಲ್ಲಿ 6 ದಿನಗಳ ತರಬೇತಿ | 13 | 260 | 13 | 264 | 13 | 260 |

| 1 | 2 | 3 | 4 | 5 | 6 | 7 | 8 |
| --- | --- | --- | --- | --- | --- | --- | --- |
| 2. | ರೈತರಿಗೆ ಉಳುಮೆ ಯಂತ್ರಗಳಲ್ಲಿ 15 ದಿನಗಳ ತರಬೇತಿ | 4 | 80 | 4 | 42 | 4 | 80 |
| 3. | ಸಹಾಯಕ ಕೃಷಿ ಅಧಿಕಾರಿಗಳಿಗೆ ಕೃಷಿ ಸಹಾಯಕರಿಗೆ ಕೃಷಿ ಯಂತ್ರ ಉಪಕರಣಗಳಿಗೆ 3 ದಿವಸಗಳ ಅಲ್ಪಾವಧಿ ತರಬೇತಿ. | 4 | 80 | 4 | 61 | 4 | 80 |
| 4. | ಕೃಷಿ ಪಾಠಶಾಲೆಯ ವಿದ್ಯಾರ್ಥಿಗಳಿಗೆ 4 ದಿನಗಳ ತರಬೇತಿ | 7 | 350 | 7 | 201 | 7 | 350 |
| | ಖರ್ಚು (ಲಕ್ಷ ರೂ.ಗಳಲ್ಲಿ) | 4.90 | | 5.2? | | 10.00 (ತಾತ್ಕಾಲಿಕ) | |

3. ಕೃಷಿ ಪಾಠಶಾಲೆಗಳು:

ರಾಜ್ಯದಲ್ಲಿ ಒಟ್ಟು 21 ಕೃಷಿ ಪಾಠಶಾಲೆಗಳು ಕಾರ್ಯ ನಿರ್ವಹಿಸುತ್ತಿದ್ದು ರೈತ ಮಕ್ಕಳಿಗೆ ಸಹಾಯಕ ಕೃಷಿ ಪದ್ಧತಿಗಳಲ್ಲಿ ಮತ್ತು ಇತರೆ ಕಸುಬುಗಳಲ್ಲಿ ಮೂರು ತಿಂಗಳ ತರಬೇತಿಯನ್ನು ನೀಡುತ್ತಿದೆ. 1995-96ನೇ ಸಾಲಿನ ಕಾರ್ಯಕ್ರಮ ಮತ್ತು ಡಿಸೆಂಬರ್ ಅಂತ್ಯದವರೆಗಿನ ಪ್ರಗತಿ ಈ ಕೆಳಗಿನಂತಿದೆ:

| ಕ್ರಮ ಸಂಖ್ಯೆ | ಕೃಷಿ ಪಾಠಶಾಲೆಯ ಹೆಸರು | ಜಿಲ್ಲೆ | 1994-95 | | | | 1995-96ನೇ ಸಾಲಿನ ಕಾರ್ಯಕ್ರಮ | |
|---|---|---|---|---|---|---|---|---|
| | | | ತರಬೇತಿಗಳ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ | ತರಬೇತಿಗಳ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ | ತರಬೇತಿಗಳ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ |
| 1 | 2 | 3 | 4 | 5 | 6 | 7 | 8 | 9 |
| 1. | ಅರಕಲಗೂಡು | ಹಾಸನ | 3 | 72 | 2 | 61 | 3 | 72 |
| 2. | ಔರಾದ | ಬೀದರ್ | 3 | 72 | 3 | 51 | 3 | 72 |
| 3. | ಅಲಮೇಲ್ | ಬಿಜಾಪುರ | 3 | 72 | 3 | 72 | 3 | 72 |

| 1 | 2 | 3 | 4 | 5 | 6 | 7 | 8 | 9 |
| --- | --- | --- | --- | --- | --- | --- | --- | --- |
| 4. | ಭುವನಹಳ್ಳಿ | ಕೋಲಾರ | 3 | 72 | 3 | 64 | 3 | 72 |
| 5. | ಅಂಭಾವಿ | ಬೆಳಗಾಂ | 3 | 72 | 1 | 18 | 3 | 72 |
| 6. | ಬ್ರಹ್ಮಾವರ | ದಕ್ಷಿಣ ಕನ್ನಡ | 3 | 72 | 3 | 53 | 3 | 72 |
| 7. | ದೇವಿಹೊಸೂರು | ಧಾರವಾಡ | 3 | 72 | 3 | 72 | 3 | 72 |
| 8. | ಚಿಕ್ಕನಹಳ್ಳಿ | ತುಮಕೂರು | 3 | 72 | 3 | 72 | 3 | 72 |
| 9. | ವಡೇಸುಗೂರು | ರಾಯಚೂರು | 3 | 72 | 3 | 62 | 3 | 72 |
| 10. | ಕಾಡಜ್ಜಿ | ಚಿತ್ರದುರ್ಗ | 3 | 72 | 3 | 52 | 3 | 72 |
| 11. | ಕಂಪ್ಲಿ | ಬಳ್ಳಾರಿ | 3 | 72 | 2 | 17 | 3 | 72 |
| 12. | ಕುಮಟಾ | ಉತ್ತರ ಕನ್ನಡ | 3 | 72 | 3 | 59 | 3 | 72 |
| 13. | ಕಾಗತಿ | ಕೋಲಾರ | 3 | 72 | 2 | 57 | 3 | 72 |
| 14. | ಕೊಟನೂರು | ಗುಲ್ಬರ್ಗಾ | 3 | 72 | 3 | 68 | 3 | 72 |
| 15. | ಕೂಡಿಗೆ | ಕೊಡಗು | 3 | 72 | 3 | 46 | 3 | 72 |
| 16. | ರಂಗದಹಳ್ಳಿ | ಚಿಕ್ಕಮಗಳೂರು | 3 | 72 | 3 | 61 | 3 | 72 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 17. | ವಳಗಿ | ಉತ್ತರ ಕನ್ನಡ | 3 | 72 | 2 | 65 | 3 | 72 |
| 18. | ನುಗು | ಮೈಸೂರು | 3 | 72 | 3 | 72 | 3 | 72 |
| 19. | ಆರ್.ಕೆ.ಶಾಲಾ | ಬೆಂಗಳೂರು(ನಗರ) | 3 | 72 | 2 | 25 | 3 | 72 |
| 20. | ನೆರಾಳುಮನಹಳ್ಳಿ | ಮಂಡ್ಯ | 3 | 72 | 3 | 72 | 3 | 72 |
| 21. | ತ್ಯಾವಣಗಿ | ಶಿವಮೊಗ್ಗ | 3 | 72 | 3 | 51 | 3 | 72 |
| | ಆರ್ಥಿಕ (ಲಕ್ಷ ರೂ.ಗಳಲ್ಲಿ) ಆರ್.ಕೆ. ಶಾಲ ಪಾಠಶಾಲೆಗೆ ಮಾತ್ರ | | | | | | 20.00 | |

4. ವೈಟಪ್ — ರೈತ ಮಹಿಳೆಯರ ಮತ್ತು ಯುವಕ ರೈತರಿಗೆ ತರಬೇತಿ ನೀಡಲು ಯೋಜನೆ(ಡ್ಯಾನಿಡಾ ಆರ್ಥಿಕ ನೆರವು):

ಕರ್ನಾಟಕ ರಾಜ್ಯದಲ್ಲಿ 1992–93ನೇ ಸಾಲಿನಿಂದ ರೈತ ಮಹಿಳೆಯರಿಗೆ ಮತ್ತು ಯುವಕ ರೈತರಿಗೆ ತರಬೇತಿ ನೀಡಲು ಡ್ಯಾನಿಡಾ ಸಹಾಯ ಧನ. ವೈಟಪ್ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ. ಈ ಯೋಜನೆಯಡಿಯಲ್ಲಿ ಸಾಧಿಸಲಾಗಿರುವ ಪ್ರಗತಿಯನ್ನು ಪರಿಶೀಲಿಸಲು ಡ್ಯಾನಿಡಾ ಮಿಷನ್ ಸಮಾಧಾನಗೊಂಡು ಈ ಯೋಜನೆಯನ್ನು ರಾಜ್ಯದಲ್ಲಿ ದಿನಾಂಕ: 1–7–1989 ರಿಂದ ಮತ್ತೆ ಆರು ವರ್ಷಗಳವರೆಗೆ "ವೈಟಪ್" ಹಂತ–11 ರಲ್ಲಿ ಯೋಜನೆಯನ್ನು ಮುಂದುವರಿಸಲು ಅನುಮೋದಿಸಲ್ಪಟ್ಟಿತು. ಈ ಹಂತ–11ರ ಯೋಜನೆಯನ್ನು ಬೀದರ್ ಜಿಲ್ಲೆಯನ್ನು ಹೊರತುಪಡಿಸಿ ಉಳಿದ 7 ಜಿಲ್ಲೆಗಳಾದ ಮೈಸೂರು, ಚಿಕ್ಕಮಗಳೂರು, ಹಾಸನ, ದಕ್ಷಿಣ ಕನ್ನಡ, ಬಳ್ಳಾರಿ, ಕೋಲಾರ ಮತ್ತು ಗುಲ್ಬರ್ಗಾಗಳಲ್ಲಿ ಕಾರ್ಯಗತಗೊಳಿಸಲಾಗುತ್ತಿದೆ.

ಈ ಯೋಜನೆಯಡಿಯಲ್ಲಿ ಆಧುನಿಕ ಕೃಷಿ ತಂತ್ರಜ್ಞಾನ ಮತ್ತು ಇತರೆ ಕಸುಬುಗಳಾದ ಪಶು ಸಂಗೋಪನೆ, ತೋಟಗಾರಿಕೆ ರೇಷ್ಮೆ ಕೃಷಿ ಮುಂತಾದವುಗಳಲ್ಲಿ ರೈತ ಮಹಿಳೆಯರಿಗೆ 10 ದಿನಗಳ ತರಬೇತಿ ಹಾಗೂ ಯುವ ರೈತರಿಗೆ 14 ದಿನಗಳ ಅವಧಿಯ ತರಬೇತಿಗಳನ್ನು ನೀಡಲಾಗುತ್ತಿದೆ. ಇದಲ್ಲದೆ ಹಂತ–11ರ ಯೋಜನೆಯಡಿಯಲ್ಲಿ ಈ ಕೆಳಕಾಣಿಸಿರುವ ಸಂಸ್ಥೆಗಳಾಧರಿತ ತರಬೇತಿಗಳನ್ನು ನೀಡುವ ಕಾರ್ಯಕ್ರಮಗಳನ್ನು ಸಹ ಸೇರಿಸಲಾಗಿದೆ.

1. ರೈತ ಮಹಿಳೆಯರಿಗೆ (ಸಂಪರ್ಕ) ಕೆಲಸಗಾರರ ತರಬೇತಿ ಕಾರ್ಯಕ್ರಮ.
2. ರೈತ ಮಹಿಳೆಯರಿಗೆ 2 ದಿನಗಳ ಗ್ರಾಮಾದ್ಯಂತ ತರಬೇತಿ ಶಿಬಿರಗಳು.
3. ರೈತ ಮಹಿಳೆಯರಿಗೆ ರೇಷ್ಮೆ, ಕೃಷಿಪಶು ಸಂಗೋಪನೆ ಮತ್ತು ತೋಟಗಾರಿಕೆಯಲ್ಲಿ ವಿಶೇಷ ತರಬೇತಿ.
4. ತರಬೇತಿ ಪಡೆದ ರೈತ ಮಹಿಳೆಯರ ಸಮ್ಮೇಳನಗಳು.

ಪ್ರಸ್ತುತ ಸಾಲಿನ ಮಾರ್ಚ್ 95ರ ಅಂತ್ಯದವರೆಗೆ ವೈಟಪ್ ಯೋಜನೆಯಡಿಯಲ್ಲಿ ಸಾಧಿಸಿರುವ ಪ್ರಗತಿ

| ಕ್ರಮ ಸಂಖ್ಯೆ | ತರಬೇತಿ ಕೇಂದ್ರಗಳು | ರೈತ ಮಹಿಳೆ | | | | ಯುವಕ ರೈತ | | | |
|---|---|---|---|---|---|---|---|---|---|
| | | ತರಬೇತಿ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ | ತರಬೇತಿ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ | ತರಬೇತಿ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ | ತರಬೇತಿ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ |
| 1 | 2 | 3 | 4 | 5 | 6 | 7 | 8 | 9 | 10 |
| 1. | ರೈತರ ತರಬೇತಿ ಮತ್ತು ಶಿಕ್ಷಣ ಕೇಂದ್ರ ಅರಬಾವಿ | 10 | 300 | 10 | 307 | 10 | 300 | 8 | 264 |
| 2. | ,, ಭದ್ರಾವತಿ | 9 | 270 | 7 | 199 | 9 | 270 | 8 | 195 |
| 3. | ,, ಚಿಕ್ಕನಹಳ್ಳಿ | 10 | 300 | 9 | 249 | 10 | 300 | 9 | 276 |
| 4. | ,, ಗಂಗಾವತಿ | 9 | 270 | 5 | 144 | 9 | 270 | 7 | 192 |
| 5. | ,, ಜಮಖಂಡಿ | 11 | 330 | 9 | 279 | 11 | 330 | 11 | 317 |
| 6. | ,, ಕುಮಟಾ | 11 | 330 | 6 | 190 | 11 | 330 | 4 | 94 |
| 7. | ,, ಕುಣಿಗಲ್ | 5 | 180 | 3 | 97 | — | — | — | — |
| 8. | ,, ಬಬ್ಬೂರು (ಹಿರಿಯೂರು) | 6 | 180 | 4 | 109 | 9 | 270 | 6 | 152 |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 9. | ಗ್ರಾಮೀಣಾಭಿವೃದ್ಧಿ ತರಬೇತಿ ಕೇಂದ್ರ, ಧಾರವಾಡ | 11 | 330 | 11 | 321 | 11 | 330 | 11 | 318 |
| 10. | ,, ಮಂಡ್ಯ | 11 | 330 | 8 | 233 | 11 | 330 | 6 | 157 |
| 11. | ರೈತ ತರಬೇತಿ ಸಂಸ್ಥೆ ಹೆಬ್ಬಾಳ, ಬೆಂಗಳೂರು | 11 | 330 | 10 | 264 | 11 | 330 | 8 | 289 |
| | ಹಂತ 2ರ ಅಡಿಯಲ್ಲಿ ನೂತನ ತರಬೇತಿ ಕೇಂದ್ರ: | | | | | | | | |
| 12. | ಅರಕಲಗೂಡು ಹಾಸನ ಜಿಲ್ಲೆ | 9 | 270 | — | — | 11 | — | — | — |
| 13. | ಬೆಳ್ತಂಗಡಿ ದಕ್ಷಿಣ ಕನ್ನಡ ಜಿಲ್ಲೆ | 8 | 240 | 2 | 49 | 8 | — | — | — |
| 14. | ಕಾಗತಿ, ಕೋಲಾರ ಜಿಲ್ಲೆ | 11 | 330 | 6 | 159 | 11 | — | — | — |
| 15. | ಕಂಪ್ಲಿ, ಬಳ್ಳಾರಿ ಜಿಲ್ಲೆ | 08 | 240 | 7 | 200 | 8 | — | — | — |
| 16. | ಕೊಟ್ಟೂರು ಗುಲ್ಬರ್ಗಾ | 10 | 300 | 4 | 107 | 10 | — | — | — |
| | ಆರ್ಥಿಕ ಪ್ರಗತಿ (ಲಕ್ಷ ರೂಪಾಯಿಗಳಲ್ಲಿ) | 45.99 | | 46.93 | | | | | |

ರೈತ ತರಬೇತಿ ಮತ್ತು ಶಿಕ್ಷಣ ಕೇಂದ್ರಗಳಲ್ಲಿ ರೈತ ಮಹಿಳೆಯರಿಗೆ ಮಾತ್ರ ನಡೆಸಲಾಗುವ ಇತರೆ ಕಾರ್ಯಕ್ರಮಗಳು ಈ ಕೆಳಗಿನಂತಿವೆ:

| ಕ್ರಮ ಸಂಖ್ಯೆ | ತರಬೇತಿ ಕಾರ್ಯಕ್ರಮ | 1994—95 ನೇ ಸಾಲಿನ ಗುರಿ | | ಸಾಧನೆ | | 1995—96ನೇ ಕಾರ್ಯಕ್ರಮ | |
|---|---|---|---|---|---|---|---|
| | | ತರಬೇತಿ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ | ತರಬೇತಿ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ | ತರಬೇತಿ ಸಂಖ್ಯೆ | ತರಬೇತಿ ಪಡೆಯುವವರ ಸಂಖ್ಯೆ |
| 1. | ರೈತಮಹಿಳೆಯರಿಗೆ 5 ದಿನಗಳ ಸಂಪರ್ಕ ಕೆಲಸಗಾರರ ತರಬೇತಿ ಕಾರ್ಯಕ್ರಮ | 37 | 1129 | 30 | 778 | 37 | 1129 |
| 2. | ರೈತಮಹಿಳೆಯರಿಗೆ 2 ದಿನಗಳ ಪೂರ್ವ ಹಂಗಾಮು ಶಿಬಿರಗಳು | 136 | 3460 | 117 | 3539 | 136 | 3400 |
| 3. | ರೈತ ಮಹಿಳೆಯರಿಗೆ ಮತ್ತು ಸಂಗರೂಢವನೆ ತೋಟಗಾರಿಕೆ ಮತ್ತು ರೇಷ್ಮೆ ಕೃಷಿಯಲ್ಲಿ ವಿಶೇಷ ತರಬೇತಿ | 16 | 802 | 17 | 709 | 16 | 802 |

ಕೃಷಿ ವಾರ್ತಾ ಸೇವೆಗಳು:

ರೈತರಿಗೆ ಹಾಗೂ ವಿಸ್ತರಣಾ ಕಾರ್ಯಕರ್ತರುಗಳಿಗೆ ಸಾಮರ್ಥ್ಯವು ಬೆಂಬಲ ಒದಗಿಸುವ ಸಲುವಾಗಿ ಇಲಾಖೆಯಲ್ಲಿ ವಾರ್ತಾ ಸೇವೆಗಳ ಜಾಲದ ಸೌಲಭ್ಯವಿದೆ.

ನಿರ್ದೇಶನಾಲಯದ ಮತ್ತು ವಿಭಾಗೀಯ ಮಟ್ಟದಲ್ಲಿ ವಿಶೇಷ ಸಾಹಿತ್ಯಗಳಪ್ರಕಟಣೆ ಹಾಗೂ ದೃಶ್ಯ ಶ್ರವಣ ಸಾಧನಗಳನ್ನು ಹೊರತರಲಾಗುತ್ತಿದೆ. ಹಾಗೂ ತರಬೇತಿ ಕೇಂದ್ರಗಳಲ್ಲಿ ಬಹು ಮಾಧ್ಯಮಗಳ ರೈತರಿಗೆ ಶಿಕ್ಷಣವನ್ನು ಕೊಡಲಾಗುತ್ತದೆ.

ಇದಲ್ಲದೆ ರೈತರಿಗೆ ಪ್ರಯೋಜನವಾಗುವಂತೆ ಆಕಾಶವಾಣಿಯ ಮೂಲಕ ಪ್ರತಿದಿನ ಮುಂಜಾನೆ ಮತ್ತು ಸಂಜೆ ವೇಳೆಗಳಲ್ಲಿ ರೈತರಿಗೆ ಸಲಹೆ ಬಿತ್ತರಿಸಲಾಗುತ್ತಿದೆ.

ವಾರ್ತಾ ವಿಭಾಗದ ವಿವಿಧ ಘಟಕಗಳಡಿ ಸಾಧಿಸಿದ ಪ್ರಗತಿ ಈ ಕೆಳಗಿನಂತಿದೆ:

| ಕ್ರಮ ಸಂಖ್ಯೆ | ವಿವರಗಳು | ಗುರಿ | ಸಾಧನೆ | 95-96ರ ಸಾಲಿನ ಕಾರ್ಯಕ್ರಮ |
|---|---|---|---|---|
| 1 | 2 | 3 | 4 | 5 |
| 1. | ಮಾಸಿಕ ಸುದ್ದಿ ಪತ್ರಿಕೆಗಳು | 48 | 38 | 48 |
| 2. | ವಿಸ್ತರಣಾ ಸಾಹಿತ್ಯಗಳು | 96 | 106 | 96 |
| 3. | ಪತ್ರಿಕಾ ಪ್ರಕಟಣೆಗಳು | 288 | 224 | 212 |
| 4. | ವೈಶಿಷ್ಟ್ಯಪೂರ್ಣ ಲೇಖನಗಳು ಮತ್ತು ಯಶಸ್ವಿ ಕಥೆಗಳು | 36 | 26 | 24 |

| 1 | 2 | 3 | 4 | 5 |
|---|---|---|---|---|
| 5. | ರೈತರಿಗೆ ಸಲಹೆ | 1825 | 1825 | 1825 |
| 6. | ಚಲನಚಿತ್ರ ಮತ್ತು ಜಾದು ಪ್ರದರ್ಶನಗಳು | 720 | 676 | 720 |
| 7. | ವಸ್ತು ಪ್ರದರ್ಶನಗಳಲ್ಲಿ ಪಾಲ್ಗೊಳ್ಳುವಿಕೆ | 120 | 124 | 120 |
| 8. | ದೂರದರ್ಶನದಲ್ಲಿ ಪ್ರಸಾರ | 5 | 5 | 6 |
| 9. | ವೀಡಿಯೋ ಚಿತ್ರೀಕರಣ | 5 | 5 | 6 |
| 10. | ಗೋಡೆ ಸುದ್ದಿ ಪತ್ರಗಳು | 4 | 1 | 4 |
| 11. | ಬಿತ್ತಿ ಪತ್ರಗಳು | 3 | 6 | 20 |

1994—95ರ ಸಾಲಿಗೆ ನಿಗದಿಪಡಿಸಿದ 40.00 ಲಕ್ಷ ರೂ.ಗಳ ಪೈಕಿ ರೂ.39.70 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಗಿದೆ. ವಿಶೇಷ ಕೃಷಿ ಕಾರ್ಯಕ್ರಮದಡಿ 3.50 ಲಕ್ಷ ರೂ.ಗಳ ಅನುದಾನಕ್ಕೆ ಪ್ರತಿಯಾಗಿ 3.46 ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಗಿದೆ. ಕೃಷಿ ಜಾತ್ರೆ ಮತ್ತು ವಸ್ತು ಪ್ರದರ್ಶನದ ರಾಜ್ಯ ವಲಯ ಯೋಜನೆಯಡಿಯಲ್ಲಿ ಒದಗಿಸಿದ 30.12 ಲಕ್ಷ ರೂ.ಗಳ ಅನುದಾನಕ್ಕೆ ಪ್ರತಿಯಾಗಿ ರೈತರ ಪ್ರವಾಸವೂ ಸೇರಿದಂತೆ ಎಲ್ಲಾ ಅನುದಾನವನ್ನು ವೆಚ್ಚ ಮಾಡಲಾಗಿದೆ.

1995—96ರ ಸಾಲಿನ ಕಾರ್ಯಕ್ರಮ:

ಕೃಷಿ ವಾರ್ತಾ ಘಟಕಕ್ಕೆ ರೂ.40.00 ಲಕ್ಷಗಳನ್ನು ಮತ್ತು ರೂ.10 ಲಕ್ಷಗಳನ್ನು ಕೃಷಿ ಜಾತ್ರೆ ಮತ್ತು ಪ್ರದರ್ಶನಗಳಿಗೆ ಒದಗಿಸಲಾಗಿದೆ.

ಇಲಾಖೆಯ ವಿವಿಧ ಚಟುವಟಿಕೆಗಳನ್ನು ಗಣಕೀಕರಣಗೊಳಿಸುವ ಉದ್ದೇಶದಿಂದ 1990ರ ನವೆಂಬರನಲ್ಲಿ ರೂ.12.64 ಲಕ್ಷಗಳ ವೆಚ್ಚದಲ್ಲಿ ನಿರ್ದೇಶನಾಲಯದಲ್ಲಿ ಗಣಕ ಕೇಂದ್ರವನ್ನು ಸ್ಥಾಪಿಸಲಾಯಿತು. ಈ ಗಣಕ ಕೇಂದ್ರವು ನಿಕನೆಟ್ ಮೂಲಕ ಜಿಲ್ಲಾ ಗಣಕ ಕೇಂದ್ರಗಳ ಜೊತೆ ಸಂಪರ್ಕ ಜಾಲವನ್ನು ಹೊಂದಿರುತ್ತದೆ. ಪ್ರಸ್ತುತ ಸಾಲಿನಲ್ಲಿ ಗಣಕ ಕೇಂದ್ರಕ್ಕೆ ಬೇಕಾಗುವ ಸಾಧನಗಳನ್ನು ಖರೀದಿಸಲು ರೂ.10.00 ಲಕ್ಷಗಳನ್ನು ವೆಚ್ಚ ಮಾಡಲಾಗಿದೆ.

**ಕೃಷಿ ಪ್ರಶಸ್ತಿ 1994–95:**

ಕಳೆದ ಮೂರು ದಶಕಗಳಲ್ಲಿ ರಾಜ್ಯದಕೃಷಿ ಉತ್ಪಾದನೆಯ ಗಣನೀಯ ಹೆಚ್ಚಳವು ರೈತರುಗಳ ತೀವ್ರ ಪ್ರಯತ್ನ ಹಾಗೂ ಸಕ್ರಿಯ ಪಾಲುಗಾರಿಕೆಯಿಂದಾಗಿರುತ್ತದೆ. ಇಂತಹ ರೈತರನ್ನು ಗುರುತಿಸಲು ರಾಜ್ಯ:ಜಿಲ್ಲಾ ತಾಲ್ಲೂಕುಮಟ್ಟದಲ್ಲಿ ಕೃಷಿ ಪ್ರಶಸ್ತಿ ಬಹುಮಾನಗಳನ್ನು ನೀಡಲು ಯೋಜಿಸಲಾಗಿತು. ಅಲ್ಲದೇ ಇದಕ್ಕಾಗಿ ರಾಜ್ಯ ಸರ್ಕಾರವು 1993–94ರ ಸಾಲಿಗೆ 100.00 ಲಕ್ಷ ರೂ.ಗಳನ್ನು ನಿಗದಿಪಡಿಸಿದೆ. ಈ ಯೋಜನೆಯಡಿ ವಿವಿಧ ಹಂತದಲ್ಲಿ ಆಯ್ಕೆ ಮಾಡಿದ ಬೆಳೆಗಳಿಗೆ ಮೂರು ಬಹುಮಾನಗಳನ್ನು ನೀಡಲು ನಿರ್ಧರಿಸಿದ್ದು ಅವುಗಳ ವಿವರಗಳು ಕೆಳಗಿನಂತಿದೆ.

(ರೂ.'ಗಳಲ್ಲಿ)

| ರಾಜ್ಯಮಟ್ಟ | ಜಿಲ್ಲಾಮಟ್ಟ | ತಾಲ್ಲೂಕು ಮಟ್ಟ |
|---|---|---|
| 1) 1,00,000 | 50,000 | 25,000 |
| 2) 50,000 | 25,000 | 10,000 |
| 3) 25,000 | 10,000 | 5,000 |

ತಾಲ್ಲೂಕು ಮಟ್ಟ: ಪ್ರತಿ ತಾಲ್ಲೂಕಿಗೆ ಒಂದು ಬೆಳೆಯಂತೆ 126 ತಾಲ್ಲೂಕುಗಳಲ್ಲಿ ಈ ಯೋಜನೆಯನ್ನು ಜಾರಿಗೊಳಿಸಿದ್ದು, ತಾಲ್ಲೂಕಿಗೆ 3 ಬಹುಮಾನಗಳಂತೆ 378 ಬಹುಮಾನಗಳನ್ನು, 50.80 ಲಕ್ಷ ರೂ. ವೆಚ್ಚದಲ್ಲಿ ವಿಜೇತ ರೈತರಿಗೆ ನೀಡಲಾಗಿದೆ. ರಾಗಿ, ಭತ್ತ, ಮುಂಗಾರಿ ಜೋಳ, ಹಿಂಗಾರಿ ಜೋಳ, ಹತ್ತಿ, ತೊಗರಿ ನೆಲಗಡಲೆ ಹಾಗೂ ಕಬ್ಬು ಬೆಳೆಗಳಡಿ ಸ್ಪರ್ಧೆ ನಡೆಸಲಾಯಿತು.

ಜಿಲ್ಲಾ ಮಟ್ಟ: ಪ್ರತಿ ಜಿಲ್ಲೆಯಲ್ಲಿ ಒಂದರಿಂದ ಐದು ಬೆಳೆಯಂತೆ, 17 ಜಿಲ್ಲೆಗಳಲ್ಲಿ ಸ್ಪರ್ಧೆ ನಡೆಸಿದ್ದು, 138 ಬಹುಮಾನಗಳನ್ನು 39.10 ಲಕ್ಷ ರೂ.ಗಳ ವೆಚ್ಚದೊಂದಿಗೆ ವಿಜೇತರಿಗೆ ನೀಡಬೇಕಾಗಿದೆ.

ರಾಜ್ಯಮಟ್ಟ: ರಾಜ್ಯಮಟ್ಟದಲ್ಲಿ ಭತ್ತ, ತೊಗರಿ, ನೆಲಗಡಲೆ, ಕಬ್ಬು, ಕಡಲೆ, ಹಿಂಗಾರಿ ಜೋಳ ಹಾಗೂ ಸೂರ್ಯಕಾಂತಿ ಬೆಳೆಗಳಲ್ಲಿ ಬೆಳೆ ಸ್ಪರ್ಧೆ ನಡೆಸಿದ್ದು, 12.25 ಲಕ್ಷ ರೂ.ಗಳ ವೆಚ್ಚದಲ್ಲಿ 21 ಬಹುಮಾನಗಳನ್ನು ವಿಜೇತರಿಗೆ ನೀಡಬೇಕಾಗಿದೆ. ಅನುದಾನದಲ್ಲಿ ಈ ಕಾರ್ಯಕ್ರಮವನ್ನು 100.00 ಲಕ್ಷ ರೂ.ಗಳ 1995–96ನೇ ಸಾಲಿನಲ್ಲಿ ಮುಂದುವರಿಸಲು ಯೋಜಿಸಿದೆ.

ಮಣ್ಣು ಆರೋಗ್ಯ ಕೇಂದ್ರಗಳು:

ಇಲಾಖೆಯು ತನ್ನ 19 ಮಣ್ಣು ಆರೋಗ್ಯ ಕೇಂದ್ರಗಳ ಮೂಲಕ ರೈತರಿಗೆ ಉಚಿತ ಮಣ್ಣು ಪರೀಕ್ಷಾ ಸೇವೆಗಳನ್ನು ನೀಡುತ್ತಿದೆ. ಪ್ರತಿ ಕೇಂದ್ರವೂ ವಾರ್ಷಿಕ ಸುಮಾರು 50000 ಮಣ್ಣು ಮಾದರಿಗಳನ್ನು ವಿಶ್ಲೇಷಿಸುವ ಸಾಮರ್ಥ್ಯವನ್ನು ಹೊಂದಿರುತ್ತದೆ. ರಸಗೊಬ್ಬರ ಬಳಕೆ ಹಾಗೂ ಇತರೆ ಮಾಹಿತಿಗಳುಳ್ಳ ಮಣ್ಣು ಪರೀಕ್ಷಾ ವರದಿಗಳನ್ನು ರೈತರುಗಳಿಗೆ ಕಳುಹಿಸಿಕೊಡಲಾಗುತ್ತದೆ ಮತ್ತು ವಿಸ್ತರಣಾ ಕಾರ್ಯಕರ್ತರು ಇದರ ಅನುಸರಣೆ ಹಾಗೂ ಮತ್ತಿತರ ವಿಷಯಗಳಲ್ಲಿ ನೆರವಾಗುತ್ತಿದ್ದಾರೆ. ಇದರಿಂದ ರೈತರು ಸಮತೋಲನ ಹಾಗೂ ಮಿತವ್ಯಯವಾದ ರಸಗೊಬ್ಬರದ ಬಳಕೆಗೆ ಅನುಕೂಲವಾಗುತ್ತದೆ. ಇದಲ್ಲದೆ ಈ ಮಣ್ಣು ಆರೋಗ್ಯ ಕೇಂದ್ರಗಳಲ್ಲಿ ಕೃಷಿಗೆ ಯೋಗ್ಯವಾದ ನೀರಿನ ವಿಶ್ಲೇಷಣೆಯನ್ನೂ ಸಹ ಕೈಗೊಳ್ಳಲಾಗುತ್ತದೆ.

1994—95ನೇ ಸಾಲಿನಲ್ಲಿ ವಿಶ್ಲೇಷಿಸಲು ಹಮ್ಮಿಕೊಳ್ಳಲಾಗಿದ್ದ 6.08ಲಕ್ಷ ಮಣ್ಣು ಮಾದರಿಗಳ ಗುರಿಗೆ ಪ್ರತಿಯಾಗಿ 4,73,464 ಮಣ್ಣು ಮಾದರಿಗಳನ್ನು ವಿಶ್ಲೇಷಿಸಿ ಫಲಿತಾಂಶಗಳನ್ನು ಕಳುಹಿಸಿಕೊಡಲಾಗಿದೆ ಹಾಗೂ 1461 ನೀರು ಮಾದರಿಗಳ ವಿಶ್ಲೇಷಣೆಯನ್ನು ಸಹ ಕೈಗೊಳ್ಳಲಾಗಿದೆ.

1995—96ನೇ ಸಾಲಿನಲ್ಲಿ 6.08 ಲಕ್ಷ ಮಣ್ಣು ಮಾದರಿಗಳನ್ನು ವಿಶ್ಲೇಷಿಸುವ ಕಾರ್ಯಕ್ರಮವಿರುತ್ತದೆ.

ಲಘು ಪೋಷಕಾಂಶ ಪ್ರಯೋಗಾಲಯ:

ಬೆಂಗಳೂರು ಹಾಗೂ ಬಳ್ಳಾರಿ ಪ್ರಯೋಗಾಲಯಗಳಲ್ಲಿ, ಪೋಷಕಾಂಶಗಳ ಮಟ್ಟವನ್ನು ತಿಳಿಯಲು 94—95ನೇ ಸಾಲಿನಲ್ಲಿ ಹೊಂದಲಾಗಿದ್ದ 15000 ಗುರಿಗೆ 7061

ಮಣ್ಣು ಮಾದರಿಗಳನ್ನು ವಿಶ್ಲೇಷಣೆ ಮಾಡಲಾಗುತ್ತದೆ.

ಪ್ರತಿಯೊಬ್ಬ ರೈತರ ಜಮೀನುಗಳಲ್ಲಿನ ಮಣ್ಣನ್ನು ಪರೀಕ್ಷಿಸಿ ಆತನ ಮಣ್ಣಿನ ಪೋಷಕಾಂಶಗಳ ಮಟ್ಟವನ್ನು ತಿಳಿದು ಅದರಂತೆ ವಿವಿಧ ಶಿಫಾರಸ್ಸುಗಳನ್ನು ಅನುಸರಿಸಲು ತಿಳಿಸಲಾಗುವುದು.

ಹಾಲಿಯಿರುವ ಮಣ್ಣು ಆರೋಗ್ಯ ಕೇಂದ್ರಗಳಿಗೆ ಇನ್ನೂ ಹೆಚ್ಚಿನ ಒಳಹಾತ ಸೌಲಭ್ಯಗಳಾದಂತಹ ಉಪಕರಣಗಳು ಕಟ್ಟಡಗಳ ರಿಪೇರಿ, ವಿದ್ಯುದೀಕರಣ, ನೀರು ಒದಗಿಸುವುದು ಹಾಗೂ ವಾಹನ ಸೌಲಭ್ಯ ಮುಂತಾದವುಗಳನ್ನು ಒದಗಿಸಿ ಬಲಯುತಗೊಳಿಸಲಾಗುವುದು.

ಮಣ್ಣು ಮಾದರಿಗಳ ಫಲಿತಾಂಶಗಳನ್ನು '' ಫಲವತ್ತತಾ ಮಟ್ಟದ ಕಾರ್ಡು'' ಗಳ ಮುಖಾಂತರ ರೈತರುಗಳಿಗೆ ತಿಳಿಸಲಾಗುತ್ತದೆ. ಈ ಯೋಜನೆಯಡಿ 94–95ನೇ ಸಾಲಿನಲ್ಲಿ 17,63,336 ಇಂತಹ ಕಾರ್ಡುಗಳನ್ನು ವಿತರಿಸಿದ್ದು, 1995–96ನೇ ಸಾಲಿನಲ್ಲಿ ಇದಕ್ಕಾಗಿ 10.00 ಲಕ್ಷ ರೂ.ಗಳನ್ನು ಮಣ್ಣು ಆರೋಗ್ಯ ಕೇಂದ್ರಗಳಿಗೆ ನಿಗದಿಪಡಿಸಲಾಗಿದೆ.

ಜೈವಿಕ ಗೊಬ್ಬರಗಳನ್ನು ಜನಪ್ರಿಯಗೊಳಿಸುವಿಕೆ:

ಇತ್ತೀಚೆಗೆ ಬೆಳೆ ಉತ್ಪಾದನೆಯಲ್ಲಿ ಜೈವಿಕ ಗೊಬ್ಬರಗಳಾದಂತಹ ನೀಲಿ ಹಸಿರು ಪಾಚಿ, ಅಜೋಲ ರೈಜೋಬಿಯಂ, ಅಜಟೋಬ್ಯಾಕ್ಟರ್ ಪಾತ್ರ ಹೆಚ್ಚಾಗಿರುವುದನ್ನು ಗುರುತಿಸಲಾಗಿದೆ. ಇಲಾಖೆಯು ಇವುಗಳನ್ನು ಸಣ್ಣ ಪ್ರಮಾಣದಲ್ಲಿ ಅಳವಡಿಸಲು ಹಾಗೂ ವಿತರಣೆ ಮಾಡಲು ಪ್ರಯತ್ನ ಮಾಡುತ್ತಿದೆ.

ಜೈವಿಕ ಗೊಬ್ಬರಗಳ ಉತ್ಪಾದನೆಯನ್ನು ಅದರಲ್ಲೂ ಮುಖ್ಯವಾಗಿ ರೈಜೋಬಿಯಂಯನ್ನು ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ, ಮಣ್ಣು ಆರೋಗ್ಯ ಕೇಂದ್ರ, ಗುಲ್ಬರ್ಗಾ ಹಾಗೂ ಬೀಜ ಪರೀಕ್ಷಾ ಕೇಂದ್ರ, ಹೆಬ್ಬಾಳ ಮತ್ತು ಧಾರವಾಡಗಳಲ್ಲಿ ತೆಗೆದುಕೊಳ್ಳಲಾಗುತ್ತಿದೆ. ಒಟ್ಟು ಸುಮಾರು 82ಟನ್ನಷ್ಟು ಜೈವಿಕ ಗೊಬ್ಬರವನ್ನು ಉತ್ಪಾದಿಸಲು 12.85 ಲಕ್ಷ ರೂ.ಗಳನ್ನು ಒದಗಿಸಲಾಗಿತ್ತು.

ನೀಲ ಹಸಿರು ಪಾಚಿ ಉತ್ಪಾದನೆ:

ನೀಲ ಹಸಿರು ಪಾಚಿಯ ಉತ್ಪಾದನೆಗಾಗಿ ಬತ್ತವನ್ನು ಬೆಳೆಯುವ ರೈತರಿಗೆ ಪ್ಯಾಕೇಟಿಗೆ ಒಂದು ರೂ.ನಂತೆ ವಿತರಿಸಲು ಭಾರತ ಸರ್ಕಾರವು 3 ಉಪ ಕೇಂದ್ರಗಳಾದ ತ್ಯಾವಣಗಿ, ಭಾರತ ಜಪಾನ್ ಕೃಷಿ ವಿಸ್ತರಣಾ ತರಬೇತಿ ಕ್ಷೇತ್ರ, ಮಂಡ್ಯ ಹಾಗೂ ನಾಗು ಕೇಂದ್ರಗಳಲ್ಲಿ ವಹಿಸಿದುದು: ಕೇಂದ್ರದಲ್ಲಿ 25 ಮೆ.ಟನ್ನುಗಳ ನೀಲ ಹಸಿರು ಪಾಚಿಯನ್ನು ಉತ್ಪಾದಿಸಲು ಯೋಜಿಸಲಾಗಿತ್ತು.

ಜೈವಿಕ ಅನಿಲ ಸ್ಥಾವರಗಳ ಸ್ಥಾಪನೆ:

ದೇಶದಲ್ಲಿನ ಇಂಧನ ವಿಷಮಸ್ಥಿತಿ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಗ್ರಾಮೀಣ ಪ್ರದೇಶದ ಹಳ್ಳಿಗಳಲ್ಲಿ ಜೈವಿಕ ಅನಿಲ ಸ್ಥಾವರಗಳನ್ನು ನಿರ್ಮಿಸಲು ಇಲಾಖೆಯು ಸಾಲ ಮಂಜೂರಾತಿ ಮಾಡುವಲ್ಲಿ ಇತರೆ ಹಣಕಾಸು ಸಂಸ್ಥೆಗಳಿಗೆ ಸಹಕಾರ ನೀಡುತ್ತದೆ. 1994–95ನೇ ಸಾಲಿನಲ್ಲಿ ಹಮ್ಮಿಕೊಳ್ಳಲಾಗಿದ್ದ 24185 ಸ್ಥಾವರಗಳಿಗೆ ಪ್ರತಿಯಾಗಿ 12467 ಸ್ಥಾವರಗಳು ಪೂರ್ಣಗೊಂಡು ಕಾರ್ಯನಿರ್ವಹಿಸುತ್ತಿವೆ. 1995–96ನೇ ಸಾಲಿನ ಗುರಿಗಳನ್ನು ಜಿಲ್ಲಾ ಪಂಚಾಯತಿಗಳು ನಿಗದಿಪಡಿಸುವುದು

ಧಾರವಾಡದಲ್ಲಿರುವ ಪ್ರಯೋಗಾಲಯವನ್ನು ಬಲಪಡಿಸುವ ಬಗ್ಗೆ

ಕೃಷಿ ವಿಶ್ವವಿದ್ಯಾನಿಲಯ, ಧಾರವಾಡದಲ್ಲಿರುವ ಅಣುಜೀವಿ ಗೊಬ್ಬರ ತಯಾರಿಕೆಯ ಪ್ರಯೋಗಾಲಯವನ್ನು 94—95 ನೇ ಸಾಲಿನಲ್ಲಿ ಬಲಪಡಿಸಲು ಯೋಜಿಸಲಾಗಿತ್ತು. ಬೆಳೆಗಳಿಗನು ಗುಣವಾಗಿ ಹಾಗೂ ಸ್ಥಳಕ್ಕೆ ಅನುಗುಣವಾಗಿ ಜೈವಿಕ ಗೊಬ್ಬರದ ಉತ್ಪಾದನೆ ಹಾಗೂ ಹೊಸ ತಳಿಗಳನ್ನು ಕಂಡು ಹಿಡಿಯುವ ಕಾರ್ಯಕ್ರಮವಿದು. ಇದಕ್ಕಾಗಿ 13.5 ಲಕ್ಷ ರೂ.ಗಳನ್ನು ಮಂಜೂರಾತಿ ಮಾಡಿ ಕೃಷಿ ವಿಶ್ವವಿದ್ಯಾನಿಲಯ, ಧಾರವಾಡದ ಸುಪರ್ದಿನಲ್ಲಿಡಲಾಗಿದೆ.

ವಿಶೇಷ ಕಾರ್ಯಕ್ರಮಗಳು:

ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದವರ ಏಳಿಗೆಗಾಗಿ ಇಲಾಖೆಯಲ್ಲಿ ವಿಶೇಷ ಘಟಕ ಯೋಜನೆ ಹಾಗೂ ಬುಡಕಟ್ಟು ಉಪ ಯೋಜನೆ ಎಂಬ ವಿಶೇಷ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಗುತ್ತಿದೆ.

ವಿಶೇಷ ಘಟಕ ಯೋಜನೆ:

ಈ ಯೋಜನೆಯನ್ನು ಪರಿಶಿಷ್ಟ ಜಾತಿ ರೈತರ ಕಲ್ಯಾಣಕ್ಕಾಗಿ ರಾಜ್ಯಾದ್ಯಂತ 175.40 ಲಕ್ಷ ರೂ.ಗಳ ಅನುದಾನದೊಂದಿಗೆ ಜಾರಿಗೊಳಿಸಲಾಯಿತು. ಕಾರ್ಯಕ್ರಮ ಹಾಗೂ ಸಾಧನೆಗಳ ವಿವರ ಕೆಳಗಿನಂತಿದೆ.

| ಕಾರ್ಯಕ್ರಮ | ಭೌತಿಕ ಗುರಿ (ಸಂಖ್ಯೆಗಳಲ್ಲಿ) | ಭೌತಿಕ ಸಾಧನೆ (ಸಂಖ್ಯೆಗಳಲ್ಲಿ) | ಆರ್ಥಿಕ ಗುರಿ (ಲಕ್ಷ ರೂ.ಗಳಲ್ಲಿ) | ಆರ್ಥಿಕ ಸಾಧನೆ (ಲಕ್ಷ ರೂ.ಗಳಲ್ಲಿ) |
|---|---|---|---|---|
| 1) ಕೃಷಿ ಪರಿಕರಗಳ ಪೂರೈಕೆ (ಶೇ.100) | 1564 | 1791 | 24.91 | 25.22 |
| 2) ತುಂತುರು ನೀರಾವರಿ ಘಟಕಗಳ ಪೂರೈಕೆ (ಶೇ 60 ಸಹಾಯಧನ ರೂ.11800-00) ಶೇ 60 ರೂ.7080-00) | 103 | 70 | 9.45 | 6.24 |
| 3) ಡೀಸಲ್ ಎಣ್ಣೆ ವಿದ್ಯುತ್‌ಚಾಲಿತ ಪಂಪುಸೆಟ್ಟುಗಳ ಪೂರೈಕೆ (ಶೇ 60 ಸಹಾಯಧನ) | 884 | 1087 | 79.60 | 90.35 |
| 4) ನೀರಿನ ತೊಟ್ಟಿಗಳ ನಿರ್ಮಾಣ | 158 | 147 | 7.43 | 7.28 |
| 5) ಕೊಳವೆ ಬಾವಿಗಳನ್ನು ತೋಡುವುದು | 177 | 82 | 22.84 | 13.60 |
| 6) ಅಂತರ್ಜಲ ಪಂಪುಸೆಟ್ಟುಗಳು | 186 | 202 | 34.14 | 31.71 |
| ಒಟ್ಟು | 3071 | 3379 | 178.37 | 175.40 |

**ಬುಡಕಟ್ಟು ಉಪಯೋಜನೆ:**

ಪರಿಶಿಷ್ಟ ವರ್ಗದ ಗುಂಪಿಗೆ ಸೇರಿದ ರೈತರುಗಳ ಸಹಾಯಕ್ಕಾಗಿ ಈ ಕಾರ್ಯಕ್ರಮವನ್ನು 1994-95ನೇ ಸಾಲಿನಲ್ಲಿ ನಿಗದಿಪಡಿಸಿದ 29.00 ಲಕ್ಷ ರೂ.ಗಳಿಗೆ ಪ್ರತಿಯಾಗಿ 25.80 ಲಕ್ಷ ರೂ.ಗಳನ್ನು ವೆಚ್ಚಮಾಡಿ, 705 ಫಲಾನುಭವಿಗಳಿಗೆ ಪ್ರತಿಯಾಗಿ 1254 ಫಲಾನುಭವಿಗಳಿಗೆ ಕೆಳಗಿನ ವಿವಿಧ ನೆರವನ್ನು ನೀಡಲಾಗಿದೆ.

1) ಪ್ರತಿ ಫಲಾನುಭವಿಗೆ ರೂ.800ಕ್ಕೆ ಮೀರದಂತೆ ಕೃಷಿ ಸಾಮಗ್ರಿಗಳ ಉಚಿತ ವಿತರಣೆ.
2) ಪ್ರತಿ ಫಲಾನುಭವಿಗೆ ರೂ.1000ಕ್ಕೆ ಮೀರದಂತೆ ಸಸ್ಯ ಸಂರಕ್ಷಣಾ ಉಪಕರಣಗಳನ್ನು ಉಚಿತವಾಗಿ ಒದಗಿಸುವುದು.
3) ಬಾವಿ ಮೂಲದ ನೀರಾವರಿ ಸೌಲಭ್ಯ ಹೊಂದಿರುವ ರೈತರಿಗೆ ಡೀಸಲ್ ಅಥವಾ ವಿದ್ಯುತ್ ಪಂಪುಸೆಟ್ಟುಗಳಿಗೆ ಪ್ರತಿ ಸೆಟ್ಟಿಗೆ ರೂ.9000.00 ಗಳಿಗೆ ಮೀರದಂತೆ ಸಹಾಯಧನವನ್ನು ನೀಡಲಾಗುತ್ತಿದೆ.

1994-95ನೇ ಸಾಲಿನಲ್ಲಿ ಸಾಧಿಸಿದ ಪ್ರಗತಿ ವಿವರ ಕೆಳಗಿನಂತಿದೆ.

| ಕ್ರಮ ಸಂಖ್ಯೆ | ಘಟಕಗಳು | ಭೌತಿಕ (ಸಂಖ್ಯೆ) ಗುರಿ | ಸಾಧನೆ | ಆರ್ಥಿಕ (ಲಕ್ಷ ರೂ.) ಗುರಿ | ಸಾಧನೆ |
|---|---|---|---|---|---|
| ಎ. ರಾಜ್ಯ ಯೋಜನೆ | | | | | |
| 1. | ಕೃಷಿ ಸಾಮಗ್ರಿಗಳು (ರೂ.800.00) | 150 | 150 | 1.20 | 1.18 |

| 1 | 2 | 3 | 4 | 5 | 6 |
|---|---|---|---|---|---|
| 2. | ಕೃಷಿ ಉಪಕರಣಗಳು (ರೂ.1000) | 160 | 248 | 1.60 | 1.58 |
| 3. | ಸಸ್ಯ ಸಂರಕ್ಷಣಾ ಉಪಕರಣಗಳು(ರೂ.1000) | 120 | 129 | 1.20 | 1.18 |
| | ಒಟ್ಟು | 430 | 527 | 4.00 | 3.94 |
| ಬ. | ವಿಶೇಷ ಕೇಂದ್ರ ನೆರವು | | | | |
| 1) | ಡೀಸಲ್ ಪಂಪು ಸೆಟ್ಟುಗಳು (3 ಹೆಚ್.ಪಿ) ಶೇ 60 (ರೂ.9000.00) | 171 | 72 | 15.5 | 3.95 |
| 2) | ವಿದ್ಯುತ್‌ಚಾಲಿತ ಪಂಪು ಸೆಟ್ಟುಗಳು(3 ಹೆಚ್.ಪಿ) ಶೇ 60(9000.00) | 104 | 61 | 9.50 | 6.67 |
| 3) | ಕೃಷಿ ಉಪಕರಣಗಳು ಹಾಗೂ ಎತ್ತುಗಳು | — | 594 | — | 11.24 |
| | ಒಟ್ಟು | 275 | 727 | 25.00 | 24.86 |

ಸಮಗ್ರ ಬೆಳೆ ವಿಮಾ ಯೋಜನೆ:

ಕರ್ನಾಟಕದಲ್ಲಿ ವಿವಿಧ ಬಗೆಯ ಹವಾಮಾನಗಳು ಹಾಗೂ ಕ್ರಿಮಿಕೀಟಗಳು ಮತ್ತು ರೋಗಗಳಿಗೆ ತುತ್ತಾಗಿ ಬೆಳೆ ಹಾನಿಯಾಗುವುದು ಸರ್ವೇ ಸಾಮಾನ್ಯವಾಗಿ ಕಂಡು ಬರುವ ಸಂಗತಿಯಾಗಿರುತ್ತದೆ. ಅದ ಪ್ರಯುಕ್ತ, ಭಾರತ ಸರ್ಕಾರ ಹಾಗೂ ಭಾರತೀಯ ಸಾಮಾನ್ಯ ವಿಮಾ ಸಂಸ್ಥೆ, ಬ್ಯಾಂಕ್ ಇವುಗಳ ಸಹ ಯೋಗದೊಂದಿಗೆ ಸಮಗ್ರ ರಾಷ್ಟ್ರೀಯ ವಿಮಾ ಬೆಳೆ

ನಷ್ಟವಾಗುವ ಸಂಭವಗಳಲ್ಲಿ ರೈತರಿಗೆ ಆರ್ಥಿಕ ಭದ್ರತೆ ಒದಗಿಸಲು ಬೆಳೆ ವಿಮಾ ಯೋಜನೆಯನ್ನು 1985ನೇ ಮುಂಗಾರಿನಿಂದ ಜಾರಿಗೆ ತರಲಾಗಿರುತ್ತದೆ.

ಕರ್ನಾಟಕದಲ್ಲಿ ಬೆಳೆ ವಿಮೆಯು ಭತ್ತ, ಧಾನ್ಯಗಳು, ಎಣ್ಣೆ ಕಾಳುಗಳು ಹಾಗೂ ಬೇಳೆಕಾಳು ಬೆಳೆಗಳಿಗೆ ಸಾಲಾಧಾರಿತವಾಗಿ ಒಳಪಡುತ್ತದೆ. ಆದರೆ ಸಾಲ ಪಡೆದಿರುವ ರೈತರು ಮಾತ್ರ ವಿಮೆ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ.

ಈ ಯೋಜನೆಯಲ್ಲಿ ರೈತರಿಂದ ಪಡೆದ ಕಂತುಗಳ ಹಾಗೂ ವಿಮಾ ಹಣವನ್ನು ರೈತರಿಗೆ ಕೊಡುವ ವೆಚ್ಚವನ್ನು ಕರ್ನಾಟಕ ಸರ್ಕಾರ ಹಾಗೂ ಭಾರತ ಸರ್ಕಾರಗಳು 1:2 ಅನುಪಾತದ ಪ್ರಮಾಣದಲ್ಲಿ ಹಂಚಿಕೊಳ್ಳುವುವು. ಸಣ್ಣ:ಅತಿ ಸಣ್ಣ ರೈತರು ಶೇ. 50ರ ಕಂತನ್ನು ಕರ್ನಾಟಕ ಸರ್ಕಾರ ಹಾಗೂ ಭಾರತ ಸರ್ಕಾರಗಳು ಸಮನಾಗಿ ಹಂಚಿ ಕೊಳ್ಳುವುವು.

1994–95ನೇ ಸಾಲಿನ ಪ್ರಗತಿ:

ಮೈಸೂರು ಜಿಲ್ಲೆಯ ಯಳಂದೂರು ತಾಲ್ಲೂಕನ್ನು ಹೊರತುಪಡಿಸಿ ಈ ಯೋಜನೆಯು ರಾಜ್ಯದ ಎಲ್ಲಾ ತಾಲ್ಲೂಕುಗಳಲ್ಲಿ ಜಾರಿಯಾಗಿದ್ದು ಕೆಳಗಿನ ಬೆಳೆಗಳು ಒಳಪಟ್ಟಿರುತ್ತವೆ.

ಹಂಗಾಮುವಾರು ಆವರಿಸಿರುವ ತಾಲ್ಲೂಕುಗಳ ಸಂಖ್ಯೆ

| ಕ್ರಮ ಸಂಖ್ಯೆ | ಬೆಳೆ | ತಾಲ್ಲೂಕುಗಳ ಸಂಖ್ಯೆ | | |
|---|---|---|---|---|
| | | ಮುಂಗಾರು | ಹಿಂಗಾರು | ಬೇಸಿಗೆ |
| 1 | 2 | 3 | 4 | 5 |
| 1. | ಭತ್ತ | 100 | 3 | 32 |
| 2. | ರಾಗಿ | 77 | — | 13 |

| 1 | 2 | 3 | 4 | 5 |
|---|---|---|---|---|
| 3. | ಸಜ್ಜೆ | 35 | — | — |
| 4. | ಮುಸುಕಿನ ಜೋಳ | 22 | — | — |
| 5. | ನೆಲಗಡಲೆ | 90 | — | 42 |
| 6. | ಸೂರ್ಯಕಾಂತಿ | 64 | 7 | — |
| 7. | ಗೋಧಿ | — | 46 | — |
| 8. | ಜೋಳ | 82 | 57 | — |
| 9. | ಕಡಲೆ | — | 33 | — |
| 10. | ಕುಸುಬೆ | — | 35 | — |

1994–95ರಲ್ಲಿ, ಮುಂಗಾರಿನಲ್ಲಿ ರೂ 8425.81 ಲಕ್ಷಗಳ ವಿಮಾ ಮೊತ್ತಕ್ಕೆ 12,17,900 ರೈತರಿಂದ 123.4 ಲಕ್ಷಗಳ ವಿಮಾ ಕಂತನ್ನು ಸಂಗ್ರಹಿಸಿದ್ದು 3.85 ಲಕ್ಷಗಳ ಪ್ರದೇಶವನ್ನು ಆವರಿಸಲಾಗಿದೆ. ಈ ಯೋಜನೆಯನ್ನು 1995- ೯6ನೇ ಸಾಲಿನಲ್ಲಿ ಮುಂದುವರಿಸಲಿದ್ದು ಇದಕ್ಕಾಗಿ 76.91 ಲ ರೂಪಾಯಿಗಳ ಅನುದಾನವನ್ನು ನಿಗದಿಪಡಿಸಿದೆ.

ಕೃಷಿ ವಿಶ್ವವಿದ್ಯಾನಿಲಯಗಳ ಕೃಷಿ ಪದವೀಧರರಿಗೆ ಉದ್ಯಮಶೀಲತೆಯ ಉತ್ತೇಜನ:

ಇತ್ತೀಚಿನ ಆಧುನಿಕ ಕೃಷಿ ತಾಂತ್ರಿಕತೆಯಿಂದಾದ ಬದಲಾವ ಯಿಂದ ರೈತರ ಅವಶ್ಯಕತೆಗಳು ಬಹಳಷ್ಟು ಬೆಳೆದಿವೆ. ಆದ್ದರಿಂ ರೈತರಿಗೆ ತಾಂತ್ರಿಕ ಕೃಷಿ ಪದವೀಧರರ ಸೇವೆಯು ಅಗತ್ಯವೆಂದು ಸರ್ಕಾರವು ಭಾವಿಸಿದೆ.

ಪ್ರಾರಂಭಿಕವಾಗಿ ಕೃಷಿ ಹಾಗೂ ಕೃಷಿಗೆ ಸಂಬಂಧಿಸಿದ ಕ್ಷೇತ್ರಗಳಲ್ಲಿ 50 ಮಂದಿ ಪದವೀಧರರನ್ನು ತೊಡಗಿಸಿದರೆ. ಗುರುತಿಸುವ ಉದ್ಯಮಶೀಲತೆ ಅಭಿವೃದ್ಧಿ ತರಬೇತಿ (ಇಡಿಪಿ) (ಒಂದೂವರೆ ತಿಂಗಳು) ಹಾಗೂ ಕೌಶಲ್ಯಾಭಿವೃದ್ಧಿ ತರಬೇತಿಯನ್ನು ಒದಗಿಸಲು ಯೋಜಿಸಿದೆ. ತರಬೇತಿ ಅವಧಿಯಲ್ಲಿ ಪ್ರತಿ ಅಭ್ಯರ್ಥಿಗೆ ಮಾಸಿಕ 1500—00 ರೂ.ಗಳ ಸ್ಟೈಫಂಡ್ ಭತ್ಯೆಯನ್ನು ನೀಡಲಾಗುವುದು ಹಾಗೂ ಯಶಸ್ವಿಯಾಗಿ ತರಬೇತಿ ಮುಗಿದ ನಂತರ ಬಂಡವಾಳ 25,000 ರೂ.ಗಳ ಬಂಡವಾಳ ರಿಯಾಯಿತಿ ಅನುದಾನವನ್ನು ಒದಗಿಸಲಾಗುವುದು. ಇದಲ್ಲದೆ ತರಬೇತಿಯಾದ ಅಭ್ಯರ್ಥಿಗಳಿಗೆ ಪೋಷಣಾ ಭತ್ಯೆಯನ್ನು ಪ್ರತಿ ತಿಂಗಳು ಮೊದಲನೇ ಸಾಲಿಗೆ 2000—00 ಎರಡನೇ ಸಾಲಿಗೆ 1500—00 ಹಾಗೂ ಮೂರನೇ ಸಾಲಿಗೆ 500—00 ಗಳನ್ನು ಮತ್ತು ಬಾಡಿಗೆ ಭತ್ಯೆಯಾಗಿ ಮೂರು ವರ್ಷಗಳಿಗೆ ಪ್ರತಿ ತಿಂಗಳು 500 ರೂ.ಗಳನ್ನು ನೀಡಲಾಗುವುದು

1994-95ನೇ ಸಾಲಿನಲ್ಲಿ ಮೈಸೂರಿನಲ್ಲಿರುವ ವಿಜ್ಞಾನ ಮತ್ತು ತಂತ್ರಜ್ಞಾನ ಉದ್ಯಮಶೀಲ ಸಂಸ್ಥೆಯು ಇ.ಡಿ.ಪಿ ತರಬೇತಿಯ ಪಠ್ಯಕ್ರಮವನ್ನು ತಯಾರಿಸಿ ಕಳುಹಿಸಿದೆ. ವಿಶ್ವವಿದ್ಯಾನಿಲಯಗಳ ತರಬೇತಿ ಸಮನ್ವಯಕರುಗಳಿಗೆ ಉದ್ಯಮಶೀಲತಾ ಪಠ್ಯಕ್ರಮ ತಯಾರಿಕೆಯಲ್ಲಿ ತರಬೇತಿ ನೀಡಲಾಗಿದೆ. ಕೌಶಲ್ಯ ಅಭಿವೃದ್ಧಿ ಕಾರ್ಯಕ್ರಮದ ವಿಷಯ ಸೂಚಿಯನ್ನು ಸಿದ್ಧಪಡಿಸಲಾಗಿದೆ.

1995—96ನೇ ಸಾಲಿನಲ್ಲಿ ಉದ್ಯಮ ಶೀಲತೆಯನ್ನು ಕೈಗೊಳ್ಳಲು ಹೊಸ ಪದವೀಧರರಿಗೆ ''ಉದ್ಯಮ ಶೀಲತಾ ತಿಳುವಳಿಕೆ ಶಿಬಿರ ವನ್ನು ನಡೆಸಲಾಗುವುದು. ಸರ್ಕಾರದಿಂದ ಆಯ್ಕೆ ಸಮಿತಿ ಸ್ಥಾಪನೆಯಾದ ಕೂಡಲೇ 50 ಮಂದಿ

ಪದವೀಧರರನ್ನು ಆರಿಸಿ ಕೃಷಿ ಉದ್ಯಮ ಶೀಲತೆಯಲ್ಲಿ ತೊಡಗಿಸಲಾಗುವುದು. 1995–96ನೇ ಸಾಲಿಗೆ ತರಬೇತಿ ಹಾಗೂ ಸಹಾಯಾನುದಾನ ಘಟಕಗಳಿಗಾಗಿ 20.00 ಲಕ್ಷ ರೂ.ಗಳನ್ನು ಒದಗಿಸಲಾಗಿದೆ.

ಬೆಳೆ ಅಂದಾಜು ಸಮೀಕ್ಷಾ ಉಪಕರಣಗಳ ಪೂರೈಕೆ:

ಬೆಳೆ ಅಂದಾಜು ಸಮೀಕ್ಷಾ ಉಪಕರಣಗಳ ಪೂರೈಕೆಗಾಗಿ 1994–95ನೇ ಸಾಲಿಗೆ 5.74 ಲಕ್ಷ ರೂ.ಗಳನ್ನು ಇಂತಹ 600 ಉಪಕರಣಗಳ ಪೂರೈಕೆ ಜಿಲ್ಲಾ ಪಂಚಾಯತ್‌ಗಳಿಗೆ ನೀಡಲಾಗಿತ್ತು, ಬೆಂಗಳೂರು ನಗರ ಜಿಲ್ಲೆ 0.26 ಲಕ್ಷ ರೂ.ಗಳನ್ನು ನೀಡಲಾಗಿತ್ತು. 1995–96ನೇ ಸಾಲಿಗೆ 750 ಉಪಕರಣಗಳ ಪೂರೈಕೆಗಾಗಿ 4.21 ಲಕ್ಷ ರೂ.ಗಳನ್ನು ನಿಗದಿಪಡಿಸಿದೆ.

ಕೃಷಿ ನಿರ್ವಹಣೆ ಯೋಜನೆ:

ಈ ಯೋಜನೆಯಡಿ ಬೇಸಾಯ ವೆಚ್ಚ ಹಾಗೂ ಬೇಸಾಯ ಖರ್ಚು ವೆಚ್ಚದ ಅನುಪಾತವನ್ನು ವಿವಿಧ ಬೆಳೆಗಳಿಗೆ ಕಂಡು ಹಿಡಿದು ಅವುಗಳನ್ನು ಸರ್ಕಾರದ ಮಟ್ಟದಲ್ಲಿ ನೀತಿ ನಿಯಮಗಳನ್ನು ರೂಪಿಸುವಲ್ಲಿ ಉಪಯೋಗಿಸಿಕೊಳ್ಳಲಾಗುವುದು. ಅದಲ್ಲದೆ ಇವು ರೈತರು ತಮ್ಮ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗಳಿಗೆ ಅನುಕೂಲವಾಗುವಂತೆ ಆರ್ಥಿಕ ಬೆಳೆಗಳನ್ನು ಆಯ್ಕೆ ಮಾಡಿಕೊಳ್ಳಲೂ ಸಹ ಸಹಾಯವಾಗುತ್ತದೆ.

1994–95ನೇ ಸಾಲಿನ ಪ್ರಗತಿ:

1) 68 ಕೇಂದ್ರಗಳಿಂದ ಮಾಹಿತಿ ಸಂಗ್ರಹಣೆ ಹಾಗೂ ಅವುಗಳ ವಿಶ್ಲೇಷಣೆ ಹಾಗೂ ಪ್ರಗತಿಗಳ ಕ್ರೋಢೀಕರಣ.

2) 1993–94ನೇ ಸಾಲಿನ ಮಾಹಿತಿಯನ್ನು ಸಂಗ್ರಹಿಸಿದ್ದು ಇದನ್ನು ಕೂಡಲೇ ಸಂಬಂಧಪಟ್ಟ ಸಮಿತಿಗಳಿಗೆ ಸಲ್ಲಿಸಲಾಗುತ್ತದೆ

ಭೂಸಾರ ಸಂರಕ್ಷಣೆ ಮತ್ತು ಸಂಬಂಧಿಸಿದ ಕಾರ್ಯಕ್ರಮಗಳು

ಕರ್ನಾಟಕ ರಾಜ್ಯದಲ್ಲಿ ಪ್ರಧಾನವಾಗಿ ಕಡಿಮೆ ಮಳೆಯಾಗುವ ಪ್ರದೇಶದಲ್ಲಿನ ವ್ಯವಸಾಯದ ಕ್ಷೇತ್ರದಲ್ಲಿ ಮಣ್ಣ ಸವಕಳಿಯ ಸಮಸ್ಯೆಯು ಬಹಳ ಗಂಭೀರ ಮತ್ತು ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಇದನ್ನು ತಡೆಗಟ್ಟಿ ಸರಿಪಡಿಸಲು ತಕ್ಷ ಕ್ರಮ ತೆಗೆದುಕೊಳ್ಳುವುದು ಅತ್ಯವಶ್ಯಕ. ಕರ್ನಾಟಕ ರಾಜ ದಲ್ಲಿ ಸುಮಾರು 84.78 ಲಕ್ಷ ಹೆಕ್ಟೇರುಗಳಷ್ಟು ಪ್ರದೇಶವನ್ನು ಅಭಿವೃದ್ಧಿ ಪಡಿಸಬೇಕಾಗಿದೆ. ಭೂಸಾರ ಸಂರಕ್ಷಣಾ ಚಟುವಟಿಕೆಗಳನ್ನು ಕರ್ನಾಟಕ ಭೂ ಅಭಿವೃದ್ಧಿ ಕಾಯಿದೆ 19 ಮೇರೆಗೆ ಕರ್ನಾಟಕ ರಾಜ್ಯ ಸರ್ಕಾರ ಹಾಗೂ ಭಾರತ ಸರ್ಕಾ ಆರ್ಥಿಕ ಸಹಾಯದೊಂದಿಗೆ ಹಂತ ಹಂತವಾಗಿ ತೀವ್ರತರವಾಗಿ ಅನುಷ್ಠಾನಗೊಳಿಸಲಾಗುತ್ತಿದೆ. ಕೃಷಿ ಇಲಾಖೆಯು ಜಲಾನ ಪ್ರದೇಶದ ಅಭಿವೃದ್ಧಿ ಕಾರ್ಯವನ್ನು ಕೇಂದ್ರ ಹಾಗೂ ರಾ ಸರ್ಕಾರದ ಅನುದಾನದೊಂದಿಗೆ ಈ ಕೆಳಗಿನ ವಿವಿಧ ಭೂಸಾರ ಸಂರಕ್ಷಣೆ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ರಾಷ್ಟ್ರೀಯ ಜಲಾನಯನ ಅಭಿವೃದ್ಧಿ ಯೋಜನೆ.
2. ಕೇಂದ್ರ ಪುರಸ್ಕೃತ ನದಿಕಣಿವೆ ಯೋಜನೆ.
3. ಕರ್ನಾಟಕ ಜಲಾನಯನ ಅಭಿವೃದ್ಧಿ ಯೋಜನೆ (ಡ್ಯಾನಿಡಾ)
4. ಪಶ್ಚಿಮ ಘಟ್ಟ ಅಭಿವೃದ್ಧಿ ಯೋಜನೆ.
5. ಬರಪೀಡಿತ ಪ್ರದೇಶಾಭಿವೃದ್ಧಿ ಯೋಜನೆ.
6. ವಿಶೇಷ ಘಟಕ ಯೋಜನೆ.
7. ಬುಡಕಟ್ಟು ಉಪಯೋಜನೆ.
8. ಜವಾಹರ ರೋಜ್‌ಗಾರ ಯೋಜನೆ.

೯. ದಶಲಕ್ಷ ಬಾವಿ ಯೋಜನೆ.

ಈ ಯೋಜನೆಗಳನ್ನು ಆಯ್ಕೆ ಮಾಡಲಾದ ಜಿಲ್ಲೆಗಳಿಗೆ ಹಾಗೂ ತಾಲ್ಲೂಕುಗಳಿಗೆ ಮಾತ್ರ ಸೀಮಿತಗೊಳಿಸಿದೆ. ನದಿ ಕಣಿವೆ ಯೋಜನೆಯಲ್ಲಿ ಕಾರ್ಯವನ್ನು ಹೆಚ್ಚು ಸವಕಳಿಗೆ ತುತ್ತಾಗುವ ಪ್ರದೇಶವನ್ನು ಗುರುತಿಸಿ ಆಧ್ಯತೆ ಮೇರೆಗೆ ಜಲಾನಯನ ಪ್ರದೇಶದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.

ವಿವಿಧ ಭೂಸಾರ ಸಂರಕ್ಷಣಾ ಯೋಜನೆಗಳು ಪ್ರಾರಂಭವಾದಾಗಿನಿಂದ ಸಾಧಿಸಿದ ಭೌತಿಕ ಮತ್ತು ಆರ್ಥಿಕ ಪ್ರಗತಿ ಈ ಕೆಳಗಿನಂತಿವೆ:—

ಭೌತಿಕ: (ಲಕ್ಷ ಹೆಕ್ಟೇರುಗಳಲ್ಲಿ)

| ಕ್ರಮ ಸಂಖ್ಯೆ | ವಿವರಗಳು | ಹೊಸ ಕಾಮಗಾರಿಗಳನ್ನೊಳಗೊಂಡಂತೆ ಅಭಿವೃದ್ಧಿಪಡಿಸಿದ ಪ್ರದೇಶ | ಆರ್ಥಿಕ (ಲಕ್ಷ ರೂ. ಗಳಲ್ಲಿ) |
|---|---|---|---|
| 1. | ಪ್ರಾರಂಭದಿಂದ 31—3—94ರ ವರೆಗೆ. | 39.34 | 28318.22 |
| 2. | 1994—95ನೇ ಸಾಲಿನಲ್ಲಿ 31—3—95ರ ವರೆಗೆ. | 1.71147 | 6967.851 |
| 3. | ಒಟ್ಟು ಪ್ರಾರಂಭದಿಂದ 31—3—95ರ ವರೆಗೆ. | 41.05147 | 35286.071 |

1. ಮಳೆಯಾಶ್ರಿತ ಕೃಷಿ ಪ್ರದೇಶಗಳ ರಾಷ್ಟ್ರೀಯ ಜಲಾನಯನ ಅಭಿವೃದ್ಧಿ ಯೋಜನೆ:—

ಈ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಶೇ. 50:50ರ ಸಮಪಾಲಿನ ಆಧಾರದ ಮೇಲೆ ಈ ಯೋಜನೆಯನ್ನು

1986–87ರಿಂದ ಕಾರ್ಯಗತ ಮಾಡಲಾಗುತ್ತಿತ್ತು. ಈ ಯೋಜನೆಯನ್ನು 8ನೇ ಯೋಜನಾ ಅವಧಿಯಲ್ಲಿ ಪುನರ ಪರಿಶೀಲಿಸಿ ರೂಪಿಸಲಾಗಿದೆ. (ಶೇ.100ರ ಕೇಂದ್ರ ಸರ್ಕಾರದ ಆರ್ಥಿಕ ಸಹಾಯದೊಂದಿಗೆ ಶೇ.75ರಷ್ಟು ಸಹಾಯಧನ ರೂಪದಲ್ಲಿ ಮತ್ತು ಶೇ.25ರಷ್ಟು ದೀರ್ಘಾವಧಿ ಸಾಲ ರೂಪದಲ್ಲಿ) ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯನ್ನು ಶೇ.75ಕ್ಕಿಂತ ಹೆಚ್ಚು ಪ್ರದೇಶವು ಶೇ.8ರಷ್ಟು ಇಳಿಜಾರಿಗಿಂತ ಕಡಿಮೆ ಇರುವ ಜಲಾನಯನಗಳಿಗೆ ಪ್ರತಿ ಹೆಕ್ಟೇರಿನ ವೆಚ್ಚವು (ಗರಿಷ್ಠ ಮಿತಿ) ರೂ.3500ಗಳು ಹಾಗೂ ಶೇ.75ಕ್ಕಿಂತ ಹೆಚ್ಚು ಪ್ರದೇಶದ ಶೇ.8ಕ್ಕಿಂತ ಹೆಚ್ಚು ಇಳಿಜಾರು ಇದ್ದರೆ ಅಂತಹ ಜಲಾನಯನಗಳಿಗೆ ರೂ.5000ಗಳ ಗರಿಷ್ಠ ಮಿತಿಯನ್ನು ಹೆಚ್ಚಿಸಲಾಗಿದೆ. 1994–95ನೇ ಸಾಲಿನಲ್ಲಿ ಈ ಕಾರ್ಯಕ್ರಮವನ್ನು ರಾಜ್ಯದ ಆರಿಸಿದ 86 ತಾಲ್ಲೂಕುಗಳಲ್ಲಿ 85 ಜಲಾನಯನಗಳಲ್ಲಿ ಕಾರ್ಯಗತಗೊಳಿಸಲಾಗುತ್ತಿದೆ. 1994–95ನೇ ಸಾಲಿನಲ್ಲಿ ಮಳೆಯಾಶ್ರಿತ ಕೃಷಿ ಪ್ರದೇಶಗಳ ರಾಷ್ಟ್ರೀಯ ಜಲಾನಯನ ಅಭಿವೃದ್ಧಿ ಯೋಜನೆಯಡಿಯಲ್ಲಿ ಸಾಧಿಸಿದ ಪ್ರಗತಿ :—

| ಕ್ರಮ ಸಂಖ್ಯೆ | ವಿವರಗಳು | ಆರ್ಥಿಕ ಗುರಿ | ಆರ್ಥಿಕ ಸಾಧನೆ |
|---|---|---|---|
| 1 | 2 | 3 | 4 |
| 1. | ವಿಸ್ತೀರ್ಣ (ಹೆ.ಗಳಲ್ಲಿ) | 96111 | 97829 |
| 2. | ಮೂಲ ಚಟುವಟಿಕೆಗಳು: | | |
| | ಅ) ಸಮೀಕ್ಷೆ ಮತ್ತು ಯೋಜನೆ. | 46.00 | 23.781 |
| | ಆ) ಸಸಿಮಡಿ ಯೋಜನೆ. | 86.90 | 74.030 |
| | ಇ) ರೈತರ ತರಬೇತಿ. | 76.77 | 50.930 |

| 1 | 2 | 3 | 4 |
|---|---|---|---|
| ಇ) | ಸಿಬ್ಬಂದಿ ವೆಚ್ಚ. | 235.00 | 244.830. |
| ಉ) | ಕೃಷಿ ಅಭಿವೃದ್ಧಿ ಮತ್ತು ಸಂಶೋಧನಾ ಕಾರ್ಯ. | 76.25 | — |
| ಊ) | ಹೊಸ ವಿಷಯಗಳ ಸಂಶೋಧನೆ. | 30.60 | 1.750 |
| 3. ಕ್ಷೇತ್ರ ಚಟುವಟಿಕೆಗಳು: | ಭೂಸಾರ ಸಂರಕ್ಷಣೆ ಮತ್ತು ಉತ್ಪಾದನಾ ಪದ್ಧತಿಗಳು. | 1448.48 | 1399.91 |
| | ಒಟ್ಟು .. | 2000.00 | 1795.231 |

<u>1995—96ನೇ ಸಾಲಿನ ಕಾರ್ಯಕ್ರಮಗಳು</u>:

1995—96ನೇ ಸಾಲಿನಲ್ಲಿ ತಾತ್ಕಾಲಿಕವಾಗಿ ಈ ಯೋಜನೆಯನ್ನು ರಾಜ್ಯದ 19 ಜಿಲ್ಲೆಗಳಲ್ಲಿ (ಮಂಡ್ಯ ಜಿಲ್ಲೆ ಹೊರತುಪಡಿಸಿ) ಆಯ್ದ 86 ತಾಲ್ಲೂಕುಗಳ 85 ಜಲಾನಯನಗಳಲ್ಲಿ ಜಾರಿಗೊಳಿಸುವ ಕಾರ್ಯಕ್ರಮವಿದೆ. (85 ಈಗಾಗಲೇ ಜಾರಿಯಲ್ಲಿರುವ ಜಲಾನಯನಗಳು) 85 ಜಲಾನಯನಗಳಲ್ಲಿ ಒಟ್ಟು ವಿಸ್ತೀರ್ಣ 1,33,000 ಹೆಕ್ಟೇರುಗಳನ್ನು 2000 ಲಕ್ಷ ರೂ.ಗಳ ಅನುದಾನದೊಂದಿಗೆ ಅಭಿವೃದ್ಧಿಪಡಿಸಲು ಯೋಜಿಸಲಾಗಿದೆ.

2. <u>ಕೇಂದ್ರ ಪುರಸ್ಕೃತ ನದಿಕಣಿವೆ ಯೋಜನೆ</u>:—

ಕೇಂದ್ರ ಪುರಸ್ಕೃತ ನದಿಕಣಿವೆ ಯೋಜನೆಯಡಿಯಲ್ಲಿ ತುಂಗಭದ್ರಾ, ನಿಜಾಮಸಾಗರ ಮತ್ತು ನಾಗಾರ್ಜುನಸಾಗರ ಎಂಬ ಮೂರು ನದಿಕಣಿವೆ ಯೋಜನೆಗಳನ್ನು ಕ್ರಮವಾಗಿ 1962—63, 1971—72 ಮತ್ತು 1973—74ನೇ ಸಾಲಿನಿಂದ

ಕರ್ನಾಟಕದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.

ಪ್ರಮುಖ ಉದ್ದೇಶಗಳು:-

- ಜಲಾನಯನ ಪ್ರದೇಶದ ಎಲ್ಲಾ ಭೂಮಿಯನ್ನು ವ್ಯಾಪಕ ಭೂಸಾರ ಸಂರಕ್ಷಣಾ ಕಾರ್ಯಕ್ರಮಕ್ಕೆ ಒಳಪಡಿಸಿ, ಜಲಾಶಯಗಳಿಗೆ ಕೊಚ್ಚಿ ಬರುವ ಮಣ್ಣಿನ ಪ್ರಮಾಣ ಕಡಿಮೆಗೊಳಿಸುವುದು, ಜಲಾಶಯದ ನೀರು ಸಂಗ್ರಹಣಾ ಸಾಮರ್ಥ್ಯ ಕಡಿಮೆಯಾಗದಂತೆ ನಿರ್ವಹಿಸುವುದು ಹಾಗೂ ಭೂಮಿಯ ಫಲವತ್ತತೆಯನ್ನು ಹೆಚ್ಚಿಸುವುದು.
- ಮಣ್ಣು ಹಾಗೂ ನೀರು ಸಂರಕ್ಷಿಸಿ ಸ್ಥಳದಲ್ಲೇ ನೀರು ಇಂಗುವಂತೆ ಮಾಡಿ ಭೂಮಿಯಲ್ಲಿ ಬೆಳೆಯ ಉತ್ಪಾದನೆ ಹೆಚ್ಚಿಸುವುದು.
- ಜಲಾನಯನ ಪ್ರದೇಶದಲ್ಲಿ ಹರಿಯುವ ನೀರಿನಿಂದ ಮಣ್ಣಿನ ಕೊಚ್ಚಣಿಯನ್ನು ಕಡಿಮೆಗೊಳಿಸುವುದು.

ಜಲಾನಯನ ಪ್ರದೇಶದಲ್ಲಿ ಕೃಷಿ ಕಾರ್ಮಿಕರಿಗೆ ಹೆಚ್ಚಿನ ಉದ್ಯೋಗ ಅವಕಾಶವನ್ನು ಸಲ್ಲಿಸುವುದು.

ಅಖಿಲ ಭಾರತ ಮಣ್ಣು ಮತ್ತು ಭೂಬಳಕೆ ಸಮೀಕ್ಷೆ ಸಂಸ್ಥೆಯು ಗುರುತಿಸಿದ ಆದ್ಯತಾ ಜಲಾನಯನ ಪ್ರದೇಶದಲ್ಲಿ ಸಮಗ್ರ ಮಣ್ಣು ಮತ್ತು ನೀರು ಸಂರಕ್ಷಣಾ ಕಾಮಗಾರಿಗಳನ್ನು ನಿಗದಿತ ಯೋಜನಾ ಅವಧಿಯಲ್ಲಿ ಪೂರ್ಣಗೊಳಿಸಲು ಸಮಗ್ರ ಕ್ರಮ ಕೈಗೊಳ್ಳಲಾಗಿದೆ. ಜಲಾನಯನ ಕ್ಷೇತ್ರದಲ್ಲಿ ಬರುವ ಫಲಾನುಭವಿಗಳೊಡಗೂಡಿ ವಿವಿಧ ಕ್ರಿಯಾಶೀಲ ಯೋಜನೆ ರೂಪಿಸುವುದರಿಂದ ಪ್ರಾರಂಭಿಸಿ, ತರಬೇತಿ, ಪ್ರಚಾರ, ರೈತರಲ್ಲಿ ತಿಳುವಳಿಕೆ ಮೂಡಿಸುವುದು, ಕಾಮಗಾರಿಗಳ ನಿರ್ವಹಣೆ, ಇತ್ಯಾದಿ ಕೆಲಸಗಳನ್ನು ಭೂ ಸಾಮರ್ಥ್ಯಕ್ಕೆ ಅನುಗುಣವಾಗಿ ಅಳವಡಿಸ

ಲಾಗುವುದು ಹಾಗೂ ಇದರಿಂದ ಭೂ ಉತ್ಪಾದನಾ ಸಾಮರ್ಥ್ಯ ಹೆಚ್ಚಿಸಲಾಗುವುದು. ಅಲ್ಲದೆ ರೈತರಿಗೆ ಹೆಚ್ಚಿನ ವರಮಾನ ಬರುತ್ತದೆ ಹಾಗೂ ಪರಿಸರ ಸಮತೋಲನ ಕಾಯ್ದುಕೊಳ್ಳಬಹುದು. ಫಲಾನುಭವಿಗಳು ನಿರಂತರವಾಗಿ ಭಾಗವಹಿಸುವಿಕೆಯಿಂದ ಜಲಾನಯನ ಪ್ರದೇಶದ ನಿರ್ವಹಣೆ ಅನುಕೂಲವಾಗುತ್ತದೆ.

ಈ ಯೋಜನೆಯಡಿಯಲ್ಲಿ ರೈತರು: ಸ್ಥಳೀಯ ಜನರ ಸಕ್ರಿಯ ಪಾತ್ರ, ಸರ್ಕಾರೇತರ ಸಂಘಸಂಸ್ಥೆಗಳು ಭಾಗವಹಿಸಲು ವಿಪುಲ ಅವಕಾಶವಿದೆ. ರೈತರಿಂದಲೇ ಕಿಸಾನ ನರ್ಸರಿ, ವಿವಿಧ ಜಾತಿ ಹುಲ್ಲಿನ ಗಿಡ, ಅರಣ್ಯ, ಸುಗಂಧ ದ್ರವ್ಯ ಇತ್ಯಾದಿ ಔಷಧಿ (ಆಯುರ್ವೇದ: ಯುನಾನಿ) ಮರಗಿಡ ಬೆಳೆಸುವುದು, ತರಬೇತಿ, ಸಸ್ಯಾಧಾರಿತ ಭೂಸಾರ ಸಂರಕ್ಷಣಾ ಕ್ರಮಗಳಿಗೆ ಆದ್ಯತೆ ನೀಡಲಾಗುವುದು, ಹವಾಗುಣ ಮಾಪನ ಕೇಂದ್ರ ಸ್ಥಾಪಿಸಿ, ಮಳೆ ಪ್ರಮಾಣ, ತೀಕ್ಷ್ಣತೆ, ಹಂಚಿಕೆ ಹಾಗೂ ರನ್-ಆಫ ಮತ್ತು ಹೂಳು ಬರುವ ಬಗ್ಗೆ ಅಂಕಿ ಅಂಶಗಳನ್ನು ವೈಜ್ಞಾನಿಕವಾಗಿ ಸಂಗ್ರಹಿಸಲು ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದೆ.

1994–95ನೇ ಸಾಲಿನ ವಾರ್ಷಿಕ ಕಾರ್ಯಕ್ರಮ ಹಾಗೂ ಸಾಧಿಸಿದ ಪ್ರಗತಿ ವಿವರ ಈ ಕೆಳಕಾಣಿಸಿದೆ. (31 ಜಲಾನಯನಗಳನ್ನೊಳಗೊಂಡ 3 ನದಿಕಣಿವೆ ಯೋಜನೆಗಳು)

| ಕ್ರಮ ಸಂಖ್ಯೆ | ವಿವರಗಳು | ಯುನಿಟ್ | ಪ್ರಾರಂಭದಿಂದ 31–3–94ರ ವರೆಗೆ | 94–95ನೇ ಸಾಲಿನ ಪ್ರಗತಿ (ಭೌತಿಕ) ಹೆ.ಗಳಲ್ಲಿ ಗುರಿ | ಪ್ರಗತಿ |
|---|---|---|---|---|---|
| 1 | 2 | 3 | 4 | 5 | 6 |
| 1. | ಸಮಪಾತಳಿ ಬದು ಸಸ್ಯ ಬದು | ಹೆ. | 331177 | 26824 | 27414 |
| 2. | ಕಿಸಾನ ನರ್ಸರಿ | ಹೆ. | 18.4 | 36 | 29 |

| 1 | 2 | 3 | 4 | 5 | 6 |
|---|---|---|---|---|---|
| 3. | ನೀರು ಸಂಗ್ರಹಣಾ ವಿನ್ಯಾಸಗಳು | ಸಂಖ್ಯೆ. | 34471 | 237 | 241 |
| 4. | ಒರಟು ಕಲ್ಲುಗಳಿಂದ ಕಟ್ಟಿದ ಸಸ್ಯತಡೆಗಳ ನಿರ್ಮಾಣ. | .. | 7681 | 3465 | 3647 |
| 5. | ಮಣ್ಣು:ಕಲ್ಲಿನ ಕೊರಕಲು ತಡೆಗಳ ನಿರ್ಮಾಣ | .. | 13118 | 4207 | 3886 |
| 6. | ಖುಷ್ಕಿ ತೋಟಗಾರಿಕೆ. | ಹೆ. | 1087 | 1231 | 956 |
| 7. | ಕೃಷಿ ಅರಣ್ಯ. | ಹೆ. | 2018 | 13700 | 280 |
| 8. | ಆರ್ಥಿಕ ಪ್ರಗತಿ (ಲಕ್ಷ ರೂ.) | | 2146.27 | 604.0 | 546.98 |

1995–96ನೇ ಸಾಲಿನ ಕಾರ್ಯಕ್ರಮಗಳು:—

32 ಜಲಾನಯನಗಳಲ್ಲಿ 570.00 ಲಕ್ಷ ರೂ.ಗಳ ಅನುದಾನದೊಂದಿಗೆ 27,000 ಹೆಕ್ಟೇರ ಪ್ರದೇಶವನ್ನು ಅಭಿವೃದ್ಧಿ ಪಡಿಸಲು ಕೃಷಿ ಹಾಗೂ ಅರಣ್ಯ ಘಟಕಗಳು ಸೇರಿದಂತೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

3. ಕರ್ನಾಟಕ ಜಲಾನಯನ ಅಭಿವೃದ್ಧಿ ಯೋಜನೆ (ಡ್ಯಾನಿಡಾ ನೆರವಿನೊಂದಿಗೆ):—

ಈ ಯೋಜನೆಯು 1990–91ನೇ ಸಾಲಿನಿಂದ ಜಾರಿಯಲ್ಲಿದ್ದು, 14 ಆರಿಸಿದ ಜಲಾನಯನಗಳಲ್ಲಿ ಅಂದರೆ ಧಾರವಾಡ (6 ಜಲಾನಯನಗಳು),ಬೆಳಗಾಂ (8 ಜಲಾನಯನಗಳು) ಮತ್ತು ಉತ್ತರಕನ್ನಡ (2 ಜಲಾನಯನಗಳು) ಜಿಲ್ಲೆಗಳಲ್ಲಿ 883 ಲಕ್ಷ ರೂ.ಗಳ ಅನುದಾನದೊಂದಿಗೆ $4\frac{1}{2}$ ವರ್ಷಗಳ ಅವಧಿಯಲ್ಲಿ ಪೂರ್ಣಗೊಳಿಸಬೇಕಾಗಿರುತ್ತದೆ. ಯೋಜನೆಯು

ಒಟ್ಟು ಅನುದಾನವನ್ನು ಪರಿಷ್ಕೃತ ಕಾರ್ಯಶೀಲ ಯೋಜನೆ ಪ್ರಕಾರ ಹೆಚ್ಚಿಸಲಾಗಿದೆ. ರೂ.1077.76 ಲಕ್ಷಗಳಿಗೆ ಪರಿಷ್ಕೃತಗೊಳಿಸಲಾಗಿದೆ.

<u>ಯೋಜನೆಯ ಮುಖ್ಯ ಉದ್ದೇಶಗಳು</u>:-

- ಸೂಕ್ತವಾದ ಭೂ ಬಳಕೆ ಪದ್ಧತಿಗಳ ಬಗ್ಗೆ ಜನರ ತಿಳುವಳಿಕೆ ಹೆಚ್ಚಿಸುವುದರ ಜೊತೆಗೆ ಅವುಗಳನ್ನು ಬಳಸುವ ಜಾಣ್ಮೆಯನ್ನು ಹೆಚ್ಚಿಸಲಾಗುವುದು.

- ಕೃಷಿ ಯೋಗ್ಯ ಜಮೀನುಗಳಲ್ಲಿ ಬೆಳೆಗಳ ಇಳುವರಿ ಹೆಚ್ಚಿಸುವುದು.

- ಗ್ರಾಮೀಣ ಮಹಿಳೆ ಮತ್ತು ಪುರುಷರಿಗೆ ಉದ್ಯೋಗಾವಕಾಶಗಳನ್ನು ವಿಪುಲಗೊಳಿಸುವುದು. ಅದರಲ್ಲೂ ಮುಖ್ಯವಾಗಿ ಚಿಕ್ಕ ಹಿಡುವಳಿದಾರರು ಮತ್ತು ಭೂರಹಿತ ಕೂಲಿಕಾರರಿಗೆ ಉದ್ಯೋಗಾವಕಾಶಗಳು ಹೆಚ್ಚುವತ್ತ ಗಮನ ಹರಿಸುವುದು.

1994—95ನೇ ಸಾಲಿನ ವಾರ್ಷಿಕ ಕಾರ್ಯಕ್ರಮ ಹಾಗೂ ಸಾಧಿಸಿದ ಪ್ರಗತಿಯು ಈ ಕೆಳಕಾಣಿಸಿದೆ:—

| ಕ್ರಮ ಸಂಖ್ಯೆ | ವಿವರಗಳು | ಯುನಿಟ್ | ಗುರಿ | | ಸಾಧನೆ | |
|---|---|---|---|---|---|---|
| | | | ಭೌತಿಕ | ಆರ್ಥಿಕ (ಲಕ್ಷ ರೂ.ಗಳಲ್ಲಿ) | ಭೌತಿಕ | ಆರ್ಥಿಕ (ಲಕ್ಷ ರೂ.ಗಳಲ್ಲಿ) |
| 1. | ಭೂ ಅಭಿವೃದ್ಧಿ ಮತ್ತು ರಚನೆಗಳು | ಹೆ.<br>ಸಂಖ್ಯೆ. | 5177 )<br>2243 ) | 121.4.14 | 6024 )<br>2223 ) | 105.12 |
| 2. | ಬೆಳೆ ಉತ್ಪಾದನೆ (ಕ್ಷೇತ್ರ ಪ್ರಾತ್ಯಕ್ಷಿಕೆಗಳು) | ಹೆ. | 312 | 3.12 | 306 | 2.83 |
| 3. | ಕೃಷಿ ಅರಣ್ಯ ಬೆಳೆಸುವಿಕೆ | ಹೆ.<br>ಲಕ್ಷ ಸಂಖ್ಯೆ. | 6664 )<br>13.43 ) | 38.59 | 6827 )<br>3.95 ) | 49.50 |
| 4. | ತೋಟಗಾರಿಕೆ. | ಲಕ್ಷ ಸಂಖ್ಯೆ. | 1.465 | 20.00 | 1.11 | 21.13 |
| 5. | ತರಬೇತಿ ಹಾಗೂ ಸಿಬ್ಬಂದಿ ವೆಚ್ಚ. | ಲಕ್ಷ ರೂ. | — | 47.799 | — | 33.06 |
| | ಒಟ್ಟು .. | | | 230.931 | | 211.64 |

1995—96ನೇ ಸಾಲಿಗೆ ಸುಮಾರು 3800 ಹೆಕ್ಟೇರ ಪ್ರದೇಶ ಉಪಚರಿಸಬಹುದೆಂದು ಅಂದಾಜು ಮಾಡಿದ್ದು, ಇದಕ್ಕೆ 277.00 ಲಕ್ಷ ರೂ.ಗಳ ಯೋಜನೆ ತಯಾರಿಸಲಾಗಿದೆ. ಈ ಯೋಜನೆಯನ್ನು 1—4—95ರಿಂದ ಇನ್ನೂ ಐದು ವರ್ಷ ವಿಸ್ತರಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ.

4. ಪಶ್ಚಿಮಘಟ್ಟ ಅಭಿವೃದ್ಧಿ ಯೋಜನೆ:—

ಕೇಂದ್ರ ಪುರಸ್ಕೃತ ಯೋಜನೆಯನ್ನು ನಮ್ಮ ರಾಜ್ಯದಲ್ಲಿ 1974—75ರಿಂದ ಆಯ್ಕೆಯಾದ 9 ಜಿಲ್ಲೆಗಳಾದ ದಕ್ಷಿಣಕನ್ನಡ, ಮೈಸೂರು, ಕೊಡಗು, ಹಾಸನ, ಬೆಳಗಾಂ, ಚಿಕ್ಕಮಗಳೂರು, ಶಿವಮೊಗ್ಗ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಒಟ್ಟು 40 ತಾಲ್ಲೂಕುಗಳಲ್ಲಿ ಜಾರಿಗೊಳಿಸಲಾಗಿದೆ.

ಈ ಯೋಜನೆಯ ಮುಖ್ಯ ಉದ್ದೇಶಗಳು:—

— ಮಣ್ಣು ಮತ್ತು ನೀರಿನ ಉತ್ತಮ ರೀತಿಯ ಬಳಕೆ.
— ಜಲಾನಯನ ಆಧಾರದ ಮೇಲೆ ಮಣ್ಣು ಮತ್ತು ತೇವಾಂಶ ಸಂರಕ್ಷಣೆ ಮಾಡುವುದು.
— ಅತೀ ಹೆಚ್ಚು ಇಳಿಜಾರು ಇರುವ ಕಡೆ ಭೂ ಅಭಿವೃದ್ಧಿ ಮತ್ತು ಆಹಾರ ಬೆಳೆಗಳಿಗೆ ಬದಲಾಗಿ ಬಹುವಾರ್ಷಿಕ ಬೆಳೆಗಳನ್ನು ಅಳವಡಿಸುವಿಕೆ.
— ಅರಣ್ಯ ಅಭಿವೃದ್ಧಿ.
— ಹುಲ್ಲುಗಾವಲು ಅಭಿವೃದ್ಧಿ.
— ಅಧಿಕ ಲಾಭಕ್ಕಾಗಿ ಆರ್ಥಿಕ ಬೆಳೆಗಳ ಅಭಿವೃದ್ಧಿ ಮತ್ತು ತೋಟಗಾರಿಕೆ ಹಾಗೂ ಸಾಂಬಾರು ಪದಾರ್ಥಗಳ ಬೆಳೆಗಳ ಕ್ಷೇತ್ರ ಹಾಗೂ ತಾಂತ್ರಿಕ ಸಲಹೆ ನೀಡುವುದು.

1994–95ನೇ ಸಾಲಿನ ವಾರ್ಷಿಕ ಕಾರ್ಯಕ್ರಮದ ಹಾಗೂ ಸಾಧಿಸಿದ ಪ್ರಗತಿ ವಿವರ ಈ ಕೆಳಕಾಣಿಸಿದೆ:—

| ಕ್ರಮ ಸಂಖ್ಯೆ | ವಿವರಗಳು | ಯೂನಿಟ್ | ಭೌತಿಕ | |
|---|---|---|---|---|
| | | | ಗುರಿ | ಪ್ರಗತಿ |
| 1. | ಭೂ ಅಭಿವೃದ್ಧಿ ಕಾರ್ಯಗಳ ವಿಸ್ತೀರ್ಣ | ಹೆ. | 1841 | 2241 |
| 2. | ನೀರು ಸಂರಕ್ಷಣೆ ವಿನ್ಯಾಸಗಳು. | ಸಂಖ್ಯೆ. | — | 472 |
| 3. | ಕೊರಕಲು ತಡೆಗಳು ಮತ್ತು ಸಸ್ಯ ಕೊರಕಲು ತಡೆಗಳು. | .. | — | 454 |
| 4. | ಫಲಾನುಭವಿಗಳು | .. | — | 1282 |
| 5. | ಜಲಾನಯನಗಳು | .. | — | 37 |
| | ಆರ್ಥಿಕ: | (ಲಕ್ಷ ರೂ.ಗಳಲ್ಲಿ) | 110.484 | 134.482 |

1995–96ನೇ ಸಾಲಿನ ಯೋಜಿಸಿದ ಕಾರ್ಯಕ್ರಮಗಳು:—

1995–96ನೇ ಸಾಲಿನಲ್ಲಿ 37 ಜಲಾನಯನಗಳಲ್ಲಿ ಮುಂದುವರೆದು ಒಟ್ಟು 122.00 ಲಕ್ಷ ರೂ.ಗಳ ಅನುದಾನದೊಂದಿಗೆ 2040 ಹೆಕ್ಟೇರು ಭೂ ಅಭಿವೃದ್ಧಿಪಡಿಸಲು ಯೋಜಿಸಲಾಗಿದೆ.

5. ಬರಪೀಡಿತ ಪ್ರದೇಶಾಭಿವೃದ್ಧಿ ಯೋಜನೆ (ಡಿಪಿಎಪಿ):—

1970–71ನೇ ಸಾಲಿನಲ್ಲಿ ಗ್ರಾಮೀಣ ಅಭಿವೃದ್ಧಿ ಕಾಮಗಾರಿಗಳ ಕಾರ್ಯಕ್ರಮವಾಗಿ ಬರಪೀಡಿತ ಪ್ರದೇಶಾಭಿವೃದ್ಧಿ ದೃಷ್ಟಿಯನ್ನು ಗಮನದಲ್ಲಿಟ್ಟು ಭಾರತ ಸರ್ಕಾರವು 1973ರಲ್ಲಿ ಈ ಕಾರ್ಯಕ್ರಮಕ್ಕೆ ಹೊಸ ದೃಷ್ಟಿ ನೀಡಿ, ಬರಪೀಡಿತ

ಪ್ರದೇಶಾಭಿವೃದ್ಧಿ ಕಾರ್ಯಕ್ರಮ ಎಂದು ಕರೆಯಲಾಯಿತು. ತದನಂತರ ಭಾರತ ಸರ್ಕಾರವು ಭೂಮಿ ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸಲು ಗ್ರಾಮೀಣ ಜನರ ಜೀವನ ಮಟ್ಟ ಸುಧಾರಿಸಲು ಪರ್ಯಾಯ ಭೂಮಿ ವ್ಯವಸ್ಥೆಗೆ ಅನುಗುಣವಾಗಿ ಅನುಕೂಲಗಳನ್ನು ರೂಪಿಸಲು ಒತ್ತು ನೀಡಿತು. ಈ ಯೋಜನೆಯನ್ನು ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿ ಆಯ್ಕೆಯಾದ 11 ಜಿಲ್ಲೆಗಳ 71 ತಾಲ್ಲೂಕುಗಳಲ್ಲಿ ಜಲಾನಯನ ಆಧಾರದ ಮೇಲೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1994—95ನೇ ಸಾಲಿನ ವಾರ್ಷಿಕ ಕಾರ್ಯಕ್ರಮ ಹಾಗೂ ಸಾಧಿಸಿದ ಪ್ರಗತಿ ವಿವರಗಳು ಈ ಕೆಳಕಾಣಿಸಿದೆ:—

| ಕ್ರಮ ಸಂಖ್ಯೆ | ವಿವರಗಳು | ಯೂನಿಟ್ | ಭೌತಿಕ ಗುರಿ | ಸಾಧನೆ |
|---|---|---|---|---|
| | **ಭೌತಿಕ:** | | | |
| 1. | ಬದು ನಿರ್ಮಾಣ:ಸಸ್ಯ ತಡೆಗಳು. | ಹೆ. | 21000 | 11535 |
| 2. | ಗುಂಡುಕಲ್ಲಿನ ಬದು. | ಮಿ. | 4500 | 645 |
| 3. | ಕೃಷಿ ಹೊಂಡ. | ಸಂಖ್ಯೆ. | 56 | 31 |
| 4. | ಕೊರಕಲು ತಡೆಗಳು (ಗುಂಡುಕಲ್ಲು+ಸಸ್ಯ) | ,, | 9912 | 5879 |
| 5. | ಆರ್.ಆರ್.ಎಸ್. ತಡೆ ಅಣೆಕಟ್ಟು ಮತ್ತು ನಾಲಾಬದು. | ಸಂಖ್ಯೆ. | 800 | 1049 |
| 6. | ನಾಲಾ ದಂಡೆಗಳಿಗೆ ಕಲ್ಲು ಹೊದಿಕೆ ಮತ್ತು ಬದು ಬಲಪಡಿಸುವಿಕೆ. | ಮಿ. | 13500 | 13082 |
| 7. | ತಿರುವುಗಾಲುವೆ:ನೀರುದಾರಿ. | ಮಿ. | 21005 | 5172 |
| 8. | ರಿಪ್ಪಿಂಗ್ ಟೆರೇಸಿಂಗ್. | ಹೆ. | 380 | 393 |
| | ಆರ್ಥಿಕ: (ಲಕ್ಷ ರೂ.ಗಳಲ್ಲಿ) | | 557.784 | 530.740 |

1995–96ನೇ ಸಾಲಿನ ಕಾರ್ಯಕ್ರಮಗಳು:–

ಕೇಂದ್ರ ಸರ್ಕಾರದ ಹೊಸ ಮಾರ್ಗಸೂಚಿ ಪ್ರಕಾರ ಜಲಾನಯನ ಪ್ರದೇಶಗಳನ್ನು ಸರಿ ಸುಮಾರು 500 ಹೆಕ್ಟೇ ಆಯ್ಕೆ ಮಾಡಲಾಗುತ್ತದೆ. ಹೆಚ್ಚಿನ ವಿವರಕ್ಕಾಗಿ ಸರ್ಕಾರದಿಂ ಮಾಹಿತಿಯನ್ನು ನಿರೀಕ್ಷಿಸಲಾಗಿದೆ.

6. ವಿಶೇಷ ಘಟಕ ಯೋಜನೆ:–

ಈ ಯೋಜನೆಯನ್ನು ಪರಿಶಿಷ್ಟ ಜಾತಿಯ ರೈತರ ಅನುಕೂಲಕ್ಕಾಗಿ 1981–82ನೇ ಸಾಲಿನಲ್ಲಿ ಜಾರಿ ಮಾಡ ಲಾಯಿತು. ಬಡತನದ ರೇಖೆಯನ್ನು ದಾಟಲು ಅನುಕೂಲ ವಾಗುವಂತೆ ಪರಿಶಿಷ್ಟ ಜಾತಿ ರೈತ ಕುಟುಂಬಗಳ ಭೂ ಅಭಿವೃ ಭೂಸಾರ ಸಂರಕ್ಷಣಾ ಕಾರ್ಯಕ್ರಮಗಳನ್ನು ತೆಗೆದುಕೊಳ್ಳ ಲಾಗುವುದು. ಈ ಯೋಜನೆಯಡಿಯಲ್ಲಿ ಬರುವ ಪರಿಶಿಷ ಜಾತಿ ರೈತರ ಅಭಿವೃದ್ಧಿಗಾಗಿ ಭೂಸಾರ ಸಂರಕ್ಷಣಾ ಕಾಮಗಾ ಗಳನ್ನು ಶೇಕಡಾ 60 ರಷ್ಟು ಸಹಾಯಧನದೊಂದಿಗೆ ಹಾಗು 15 ಸಮ ವಾರ್ಷಿಕ ಕಂತುಗಳಲ್ಲಿ ವಸೂಲಿ ಮಾಡಲಾಗುವ ಶೇ 40 ರಷ್ಟು ಸಾಲದ ಅಂಶದೊಂದಿಗೆ ಕಾರ್ಯಗತಗೊಳಿಸಲಾಗು ತ್ತಿದೆ. 1993–94ನೇ ಸಾಲಿನ ವರೆಗೆ ಜಿಲ್ಲಾ ವಲಯದಡಿ ಯಲ್ಲಿ ಮಾತ್ರ ಈ ಯೋಜನೆಯನ್ನು ಅನುಷ್ಠಾನಗೊ ಲಾಗುತ್ತಿತ್ತು. ಆದರೆ 1994–95ನೇ ಸಾಲಿನಿಂದ ಜಿಲ್ಲಾವಲ ಜೊತೆಗೆ ಈ ಯೋಜನೆಯನ್ನು ರಾಜ್ಯ ವಲಯದಡಿಯಲ ಸಹ ಅನುಷ್ಠಾನಗೊಳಿಸಲಾಗುತ್ತಿದೆ.

1994–95ನೇ ಸಾಲಿನ ವಾರ್ಷಿಕ ಕಾರ್ಯಕ್ರಮ ಹ ಸಾಧಿಸಿದ ಪ್ರಗತಿಯ ವಿವರಗಳನ್ನು ಈ ಕೆಳಕಾಣಿಸಿದೆ (ಜಿಲ್ಲಾ ವಲಯ):–

| ಕ್ರಮ ಸಂಖ್ಯೆ. | ವಿವರಗಳು | ಯೂನಿಟ | ಭೌತಿಕ | |
|---|---|---|---|---|
| | | | ಗುರಿ | ಸಾಧನೆ |
| 1. | ಭೂ ಅಭಿವೃದ್ಧಿ ಕಾರ್ಯ ಕ್ರಮ: ನಿರ್ವಹಣಾಕಾರ್ಯ | ಹೆ. | 1957 | 1682 |
| 2. | ಜೈವಿಕ ತಡೆಗಳು ಮತ್ತು ಕೊರಕಲು ತಡೆಗಳು ಹಾಗೂ ನೀರು ಸಂಗ್ರಹಣಾ ವಿನ್ಯಾಸಗಳು. | ಸಂಖ್ಯೆ. | 595 | 1338 |
| 3. | ಫಲಾನುಭವಿಗಳು. | .. | — | 2721 |
| | ಆರ್ಥಿಕ: (ಲಕ್ಷ ರೂ.ಗಳಲ್ಲಿ) | | 107.65 | 109.202 |

ರಾಜ್ಯ ವಲಯ:—

1994—95ನೇ ಸಾಲಿಗೆ ಸದರಿ ಯೋಜನೆಯನ್ನು ರಾಜ್ಯವಲಯದಡಿಯಲ್ಲಿ ಅನುಷ್ಠಾನಗೊಳಿಸಲು ರೂ.262.65 ಲಕ್ಷಗಳನ್ನು ಆಯವ್ಯಯದಲ್ಲಿ ಒದಗಿಸಿತ್ತಾದರೂ, ಹಣ ಕ್ರೋಢೀಕರಣಕ್ಕಾಗಿ 200.00 ಲಕ್ಷ ರೂ.ಗಳನ್ನು ಹಿಂದಕ್ಕೆ ಪಡೆದುಕೊಳ್ಳಲಾಗಿದೆ. ಉಳಿದ 62.65 ಲಕ್ಷ ರೂ.ಗಳಿಗೆ ಫೆಬ್ರವರಿ ಮೊದಲ ವಾರದಲ್ಲಿ ಸರ್ಕಾರದಿಂದ ಆಡಳಿತಾತ್ಮಕ ಮಂಜೂರಾತಿ ದೊರೆತಿದ್ದು, ಮಾರ್ಚ್ ತಿಂಗಳಿನಲ್ಲಿ ಪ್ರಗತಿ ಸಾಧಿಸಲಾಗಿದೆ.

1995—96ನೇ ಸಾಲಿಗೆ ಕಾರ್ಯಕ್ರಮಗಳು:—

ಜಿಲ್ಲಾ ವಲಯ:—

84.75 ಲಕ್ಷ ರೂ.ಗಳ ಅನುದಾನದೊಂದಿಗೆ 2825 ಹೆ. ಪ್ರದೇಶವನ್ನು ಅಭಿವೃದ್ಧಿ ಪಡಿಸಲು ಉದ್ದೇಶಿಸಲಾಗಿದೆ.

ರಾಜ್ಯ ವಲಯ:—

348.00 ಲಕ್ಷ ರೂ.ಗಳ ಅನುದಾನವನ್ನು ರಾಜ್ಯವಲಯದಡಿಯಲ್ಲಿ ನಿಗದಿಪಡಿಸಲಾಗಿದ್ದು, ಸದರಿ ಯೋಜನೆಯನ್ನು ಕಿರು

ಜಲಾನಯನದ ಆಧಾರದ ಮೇಲೆ ಅನುಷ್ಠಾನಗೊಳಿಸಿ, 11600 ಹೆ.ಪ್ರದೇಶವನ್ನು ಸಮಗ್ರವಾಗಿ ಉಪಚರಿಸಲು ಯೋಜಿಸಲಾಗಿದೆ

1994—95ನೇ ಸಾಲಿನ ಕಾರ್ಯಕ್ರಮ ಗುರಿ ಸಾಧನೆ ಕೆಳಕಂಡಂತಿದೆ:—

| ಕ್ರಮ ಸಂಖ್ಯೆ | ಕಾಮಗಾರಿಗಳು | ಯೂನಿಟ್ | ಗುರಿ | ಸಾಧನೆ |
|---|---|---|---|---|
| 1. | ಭೂ ಅಭಿವೃದ್ಧಿ | ಹೆ. | 1378.99 | 1345.1 |
| 2. | ನೀರು ಸಂಗ್ರಹಣಾ ರಚನೆಗಳು. | ಸಂಖ್ಯೆ. | 157 | 160 |
| 3. | ಕೊರಕಲು ನಿರ್ವಹಣೆ ರಚನೆಗಳು. | " | 866 | 885 |
| 4. | ನೀರು ಹರಿಗಳು ಹಾಗೂ ತಿರುವುಗಾಲುವೆಗಳು. | ಆರ್‌ಎಂಟಿ. | 22636 | 18330 |
| 5. | ಫಲಾನುಭವಿಗಳು | ಸಂಖ್ಯೆ. | — | 1991 |
| 6. | ಆರ್ಥಿಕ (ಲಕ್ಷ ರೂ.ಗಳಲ್ಲಿ) | | 62.65 | 62.550 |

7. <u>ಬುಡಕಟ್ಟು ಉಪಯೋಜನೆ</u>:—

ಈ ಯೋಜನೆಯನ್ನು 1978—79ರಲ್ಲಿ ಪ್ರಾರಂಭಿಸಲಾಗಿದ್ದು, ಮೈಸೂರು, ಕೊಡಗು, ದಕ್ಷಿಣಕನ್ನಡ ಹಾಗೂ ಚಿಕ್ಕಮಗಳೂರು ಜಿಲ್ಲೆಗಳ ಆರಿಸಿದ 23 ಗಿರಿಜನ ಕಾಲೋನಿಗಳ ಅಭಿವೃದ್ಧಿಗಾಗಿ ಉದ್ದೇಶಿಸಲಾಗಿದೆ. ಫಲಾನುಭವಿಗಳು ಶೇ.100 ರಷ್ಟು ಸಹಾಯ ಪಡೆಯಲಿದ್ದಾರೆ.

1994—95ನೇ ಸಾಲಿನ ಕಾರ್ಯಕ್ರಮ ಹಾಗೂ ಸಾಧನೆ ಕೆಳಕಾಣಿಸಿದೆ:—

| ಕ್ರಮ ಸಂಖ್ಯೆ | ವಿವರ | ಯುನಿಟ್ | ಗುರಿ | ಸಾಧನೆ |
|---|---|---|---|---|
| 1. | ಭೂ ಅಭಿವೃದ್ಧಿ | ಹೆ. | 66.00 | 60.00 |
| 2. | ನೀರು ಸಂಗ್ರಹಣಾ ಮಾದರಿಗಳು. | ಸಂಖ್ಯೆ. | 70 | 20 |
| 3. | ಫಲಾನುಭವಿಗಳು | ,, | — | 51 |
| 4. | ಆರ್ಥಿಕ (ಲಕ್ಷ ರೂ.ಗಳಲ್ಲಿ) | | 8.300 | 5.00 ° |

° ಅನುದಾನವನ್ನು ದಕ್ಷಿಣಕನ್ನಡ ಜಿಲ್ಲೆಗೆ ಮಾತ್ರ ಬಿಡುಗಡೆ ಮಾಡಲಾಗಿದೆ.

ಬಂಡಕಟ್ಟು ಉಪಯೋಜನೆ — ರಾಜ್ಯವಲಯ:

ರಾಜ್ಯವಲಯದಡಿ ಈ ಯೋಜನೆಯನ್ನು 147 ಲಕ್ಷ ರೂ.ಗಳ ಅನುದಾನದೊಂದಿಗೆ ಕಾರ್ಯಗತಗೊಳಿಸಲು ಯೋಜಿಸಲಾಗಿತ್ತು. ಅನುದಾನ ಕ್ರೋಢೀಕರಣಕ್ಕಾಗಿ 75 ಲಕ್ಷ ರೂ.ಗಳನ್ನು ಮಾತ್ರ ಪಡೆಯಲಾಗಿದ್ದು ಇದರ 72.00 ಲಕ್ಷ ರೂ.ಗಳನ್ನು ಸಂಬಂಧಿಸಿದ ಜಿಲ್ಲೆಗಳಿಗೆ ಫೆಬ್ರವರಿ ತಿಂಗಳಲ್ಲಿ ಬಿಡುಗಡೆ ಮಾಡಲಾಗಿರುತ್ತದೆ. ಕಾರ್ಯಕ್ರಮ ಹಾಗೂ ಸಾಧನೆ ವಿವರ ಕೆಳಕಂಡಂತಿದೆ:—

| ಕ್ರಮ ಸಂಖ್ಯೆ | ಕಾಮಗಾರಿಗಳು | ಯುನಿಟ್ | ಗುರಿ | ಸಾಧನೆ |
|---|---|---|---|---|
| 1. | ಭೂ ಅಭಿವೃದ್ಧಿ | ಹೆ. | 929.92 | 704.32 |
| 2. | ನೀರು ಸಂಗ್ರಹಣಾ ರಚನೆಗಳು. | ಸಂಖ್ಯೆ. | 147 | 144 |
| 3. | ಕೊರಕಲು ನಿರ್ವಹಣೆ ರಚನೆಗಳು. | ಸಂಖ್ಯೆ. | 422 | 431 |
| 4. | ನೀರುಗಾಲುವೆಗಳು: ತಿರುವು ಗಾಲುವೆಗಳು. | ಆರ್‌ಎಂಟಿ. | 19640 | 6040 |

(ಮುಂದುವರಿದಿದೆ)

| ಕ್ರಮ ಸಂಖ್ಯೆ | ಕಾಮಗಾರಿಗಳು | ಯುನಿಟ | ಗುರಿ | ಸಾಧನೆ |
|---|---|---|---|---|
| 5. | ಫಲಾನುಭವಿಗಳು | ಸಂಖ್ಯೆ. | — | 984 |
| 6. | ಆರ್ಥಿಕ | (ಲಕ್ಷ ರೂ.ಗಳಲ್ಲಿ) | 72.00 | 70.746 |

8. ಜವಾಹರ ರೋಜಗಾರ ಯೋಜನೆ:—

ಜವಾಹರ ರೋಜಗಾರ ಯೋಜನೆಯನ್ನು 1989–90 ನೇ ಸಾಲಿನಿಂದ ಈ ಕೆಳಗಿನ ಉದ್ದೇಶಗಳಿಗಾಗಿ ಕಾರ್ಯಗತ ಮಾಡಲಾಗುತ್ತಿದೆ.

ಪ್ರಮುಖ ಉದ್ದೇಶಗಳು:—

— ನಿರುದ್ಯೋಗ ಮತ್ತು ಸಾಕಷ್ಟು ಉದ್ಯೋಗವಿಲ್ಲದ ಗ್ರಾಮಾಂತರ ಪ್ರದೇಶದ ಗಂಡಸರು ಮತ್ತು ಮಹಿಳೆಯರಿಗೆ ಹೆಚ್ಚಿನ ಮತ್ತು ಲಾಭದಾಯಕ ಉದ್ಯೋಗ ಅವಕಾಶಗಳನ್ನು ಕಲ್ಪಿಸುವುದು.

— ಬಡವರಿಗಾಗಿ ನೇರ ಮತ್ತು ಲಾಭದಾಯಕ ಅಂಶಗಳನ್ನು ಮುಂದುವರಿಸುವುದಕ್ಕಾಗಿ ಉತ್ಪಾದನೆ ಹಾಗೂ ಸಮುದಾಯ ಉತ್ಪಾದನಾ ಆಸ್ತಿಗಳನ್ನು ಸೃಷ್ಟಿಪಡಿಸುವುದು.

— ಗ್ರಾಮಾಂತರ ಪ್ರದೇಶಗಳ ಆರ್ಥಿಕ ಮತ್ತು ಸಾಮಾಜಿಕ ಒಳಹಂತ ಸೌಲಭ್ಯಗಳನ್ನು ಬಲಪಡಿಸುವುದು.

— ಗ್ರಾಮಾಂತರ ಪ್ರದೇಶಗಳಲ್ಲಿ ಬಡತನ ರೇಖೆಗಿಂತ ಕೆಳಗಿನವರ ಜೀವನಮಟ್ಟವನ್ನು ಒಟ್ಟಾರೆ ಸುಧಾರಿಸುವಂತೆ ಮಾಡುವುದು.

— ಈ ಯೋಜನೆಯಡಿಯಲ್ಲಿ ಉದ್ಯೋಗವನ್ನು ಒದಗಿಸುವ ಮೂಲಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ

ಮತ್ತು ವಿಮುಕ್ತಿ ಹೊಂದಿದ ಜೀತದಾಳುಗಳಿಗೆ ಆದ್ಯತೆ ಯನ್ನು ನೀಡಲಾಗುವುದು.

1994-95ನೇ ಸಾಲಿನ ಯೋಜನೆ ಹಾಗೂ ಪ್ರಗತಿ :-

| ಕ್ರಮ ಸಂಖ್ಯೆ | ವಿವರ | ಘಟಕ | ಗುರಿ | ಸಾಧನೆ |
|---|---|---|---|---|
| 1. | ಭೂ ಅಭಿವೃದ್ಧಿ ಕಾಮಗಾರಿಗಳು. | ಹೆ. | 2000 | 2150 |
| 2. | ನೀರು ಸಂಗ್ರಹಣಾ ವಿನ್ಯಾಸಗಳು. | ಸಂಖ್ಯೆ. | 2000 | 1985 |
| 3. | ಕೊರಕಲು ತಡೆ | ,, | 3000 | 3085 |
| 4. | ತಿರುವುಗಾಲುವೆ:ನೀರುದಾರಿ. | ಮೀ. | 5000 | 3420 |
| 5. | ಆರ್ಥಿಕ (ಲಕ್ಷ ರೂ.ಗಳಲ್ಲಿ) | | 200 | 859.118 |

1995-96ರ ಕಾರ್ಯಕ್ರಮ :-

ಸದರಿ ಕಾರ್ಯಕ್ರಮವು ಜಿಲ್ಲಾ ಪರಿಷತ್ ಅಡಿಯಲ್ಲಿ ಬರುವ ಪ್ರಯುಕ್ತ ಪ್ರತಿ ವರ್ಷ ಭೌತಿಕ ಮತ್ತು ಆರ್ಥಿಕ ಗುರಿಗಳನ್ನು ಸದರಿ ಜಿಲ್ಲಾ ಪರಿಷತ್ತುಗಳೇ ನಿರ್ಧರಿಸುವವು.

9. ದಶಲಕ್ಷ ಬಾವಿ ಯೋಜನೆ :-

ಈ ಯೋಜನೆಯನ್ನು 1989-90ರಲ್ಲಿ ಕರ್ನಾಟಕ ರಾಜ್ಯದ 19 ಜಿಲ್ಲೆಗಳಲ್ಲಿ ಜವಾಹರ ರೋಜಗಾರ ಯೋಜನೆಯ ಉಪಯೋಜನೆಯಾಗಿಯಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.

ಮುಖ್ಯ ಉದ್ದೇಶಗಳು :-

- ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಸೇರಿದ ಸಣ್ಣ ಮತ್ತು ಅತಿಸಣ್ಣ ರೈತರಿಗೆ ಉಚಿತವಾಗಿ ತೆಗೆದ ಬಾವಿಗಳನ್ನು ಒದಗಿಸುವುದು.

— ವಿಮುಕ್ತಿಗೊಳಿಸಿದ ಜೀತದಾಳುಗಳನ್ನು ಈ ಯೋಜನೆ ಯಡಿಯಲ್ಲಿ ಲಾಭದಾಯಕ ಅಂಶಗಳಿಂದ ಉತ್ತೇಜನ ನೀಡುವುದು.

— ನೀರಾವರಿ ತೆರೆದ ಬಾವಿಗಳು ಸಾಧ್ಯವಾಗದಂತಹ ಕಡೆಗಳಲ್ಲಿ, ನೀರು ಸಂಗ್ರಹಣಾ ವಿನ್ಯಾಸಗಳನ್ನು ಕಲ್ಪಿಸುವ ಮೂಲಕ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಸಣ್ಣ ಮತ್ತು ಅತಿ ಸಣ್ಣ ರೈತರ ಭೂಮಿಗಳನ್ನು ಅಭಿವೃದ್ಧಿಪಡಿಸುವುದು.

1994—95ನೇ ಸಾಲಿನಲ್ಲಿ ಕಾರ್ಯಕ್ರಮ ಹಾಗೂ ಸಾಧನೆ:—

| ಕ್ರಮ ಸಂಖ್ಯೆ | ವಿ ವ ರ | ಘಟಕ | ಗುರಿ | ಸಾಧನೆ |
|---|---|---|---|---|
| 1. | ಭೂ ಅಭಿವೃದ್ಧಿ ಕಾಮಗಾರಿಗಳು. | ಹೆ. | 10000 | 16745 |
| 2. | ನೀರು ಸಂಗ್ರಹಣಾ ವಿನ್ಯಾಸಗಳು. | ಸಂಖ್ಯೆ. | 8000 | 7879 |
| 3. | ಕೊರಕಲು ತಡೆ | .. | 15000 | 16946 |
| 4. | ತಿರುವುಗಾಲುವೆ:ನೀರುಬಾರಿ ಹಾಗೂ ಇತರೆ. | ಮೀ. | 25000 | 21246 |
| 5. | ಆರ್ಥಿಕ (ಲಕ್ಷ ರೂ.ಗಳಲ್ಲಿ) | | 1350.0 | 2615.49 |

1994—95ನೇ ಸಾಲಿನ ಜವಾಹರ್ ರೋಜಗಾರ ಯೋಜ ಮತ್ತು ದಶಲಕ್ಷ ಬಾವಿ ಯೋಜನೆಯ ಕಾರ್ಯಕ್ರಮಗಳು ಜಿಲ್ಲಾ ಪರಿಷತ್ ಅಧೀನದಲ್ಲಿ ಬರುವುದರಿಂದ ಸದರಿ ಭೌತಿಕ ಮತ್ತು ಆರ್ಥಿಕ ಗುರಿಗಳನ್ನು ಆಯಾ ಜಿಲ್ಲಾ ಪರಿಷತ್‌ಗಳಲ್ಲಿ ನಿರ್ಧರಿಸಲಾಗುವುದು.

ಭೂಸಾರ ಸಂರಕ್ಷಣಾ ತರಬೇತಿ ಕೇಂದ್ರಗಳು:—

ಹೊಸ ಕೃಷಿ ಸಂಶೋಧನೆಗಳಿಂದ ಕಂಡು ಬಂದ ತಾಂತ್ರಿಕ ಜ್ಞಾನವನ್ನು ಕ್ಷೇತ್ರ ಮಟ್ಟದಲ್ಲಿ ಸಿಬ್ಬಂದಿಯು ಮುಖಾಂತರ ಕಾರ್ಯರೂಪಕ್ಕೆ ತರಲು, ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರಿಗೆ ತರಬೇತಿ ನೀಡುವುದು ಬಹುಮುಖ್ಯವಾದ ಅಂಶವಾಗಿರುತ್ತದೆ. ಭೂಸಾರ ಸಂರಕ್ಷಣಾ ಅಧಿಕಾರಿಗಳು ಹಾಗೂ ಸಿಬ್ಬಂದಿಗೆ ಕೃಷಿ ಇಲಾಖೆಯು ಈ ಕೆಳಗೆ ಸೂಚಿಸಿರುವ ತರಬೇತಿ ಕೇಂದ್ರಗಳಲ್ಲಿ ತರಬೇತಿಯನ್ನು ನೀಡಲಾಗುತ್ತಿದೆ.

1. ಖುಷ್ಕಿ ಭೂಮಿ ಬೇಸಾಯ, ಮಣ್ಣು ಮತ್ತು ನೀರಿನ ನಿರ್ವಹಣೆ, ಸಿಬ್ಬಂದಿ ತರಬೇತಿ ಕೇಂದ್ರ, ಮೈಸೂರು.
2. ಭೂಸಾರ ಸಂರಕ್ಷಣಾ ತರಬೇತಿ ಕೇಂದ್ರ, ಬಿಜಾಪುರ.
3. ಸೂಕ್ಷ್ಮ ನೀರಾವರಿ ಮತ್ತು ನೀರು ಬಳಕೆ ತರಬೇತಿ ಕೇಂದ್ರ, ಧಾರವಾಡ.

1. ಖುಷ್ಕಿ ಭೂಮಿ ಬೇಸಾಯ, ಮಣ್ಣು ಮತ್ತು ನೀರಿನ ನಿರ್ವಹಣೆ, ಸಿಬ್ಬಂದಿ ತರಬೇತಿ ಕೇಂದ್ರ, ಮೈಸೂರು:—

ಇಲಾಖೆಯು ಸಹಾಯಕ ಕೃಷಿ ಅಧಿಕಾರಿಗಳಿಗೆ ಮತ್ತು ಇತರ ಅಧಿಕಾರಿಗಳಿಗೆ ಮಣ್ಣು ಮತ್ತು ನೀರು ಸಂರಕ್ಷಣೆ, ಖುಷ್ಕಿ ಬೇಸಾಯ ತಾಂತ್ರಿಕತೆಯಲ್ಲಿ ಹಾಗೂ ಜಲಾನಯನ ಪ್ರದೇಶ ಅಭಿವೃದ್ಧಿ ಮುಂತಾದ ವಿವಿಧ ರೀತಿಯ ಭೂಸಾರ ಸಂರಕ್ಷಣೆ ತರಬೇತಿ ಕೊಡುವ ಉದ್ದೇಶದಿಂದ ಈ ತರಬೇತಿ ಕೇಂದ್ರವನ್ನು 1973ನೇ ಸಾಲಿನಲ್ಲಿ ಪ್ರಾರಂಭಿಸಲಾಯಿತು.

1994—95ನೇ ಸಾಲಿನ ಕಾರ್ಯಕ್ರಮ ಹಾಗೂ ಪ್ರಗತಿ ಈ ಕೆಳಗಿನಂತಿದೆ:—

| ಕ್ರಮ ಸಂಖ್ಯೆ | ವಿವರ | ಘಟಕ | ಗುರಿ | ಸಾಧನೆ |
|---|---|---|---|---|
| 1. | ಅಧಿಕಾರಿಗಳಿಗೆ ಅಲ್ಪಾವಧಿ ತರಬೇತಿ. | ಸಂಖ್ಯೆ. | 40 | 8 |
| 2. | ಸಹಾಯಕ ಕೃಷಿ ಅಧಿಕಾರಿಗಳಿಗೆ (ಭೂ.ಸಂ.) ಒಣಬೇಸಾಯ ತರಬೇತಿ. | .. | 40 | 14 |
| 3. | ಸಹಾಯಕ ಕೃಷಿ ಅಧಿಕಾರಿಗಳಿಗೆ (ಭೂ.ಸಂ.) ಪುನರವ್ಯಾಸಂಗ ತರಬೇತಿ. | .. | 80 | 37 |
| 4. | ಜಿಲ್ಲಾಮಟ್ಟದ ಪೆರಿಪ್ಯಾಟ್ರಿಕ ತರಬೇತಿ. | ತಂಡ. | 15 | 8) ತಂಡಗ<br>511) ಅಧಿಕಾ<br>) ಗಳು |
| 5. | 1994–95ನೇ ಸಾಲಿನ ಆರ್ಥಿ ಆರ್ಥಿಕ | (ಲಕ್ಷ ರೂ.ಗಳಲ್ಲಿ) | 12.44 | 12.70 |

1995–96ನೇ ಸಾಲಿನ ಕಾರ್ಯಕ್ರಮಗಳು (ತಾತ್ಕಾಲಿಕ(

| ಕ್ರಮ ಸಂಖ್ಯೆ | ವಿವರಗಳು | | ಗುರಿ |
|---|---|---|---|
| 1. | ಅಧಿಕಾರಿಗಳಿಗೆ ವಿಶೇಷ ಅಲ್ಪಾವಧಿ ತರಬೇತಿ ಕೇಂದ್ರ | (ಸಂಖ್ಯೆ) | 40 |
| 2. | ಸಹಾಯಕ ಕೃಷಿ ಅಧಿಕಾರಿ (ಭೂ.ಸಂ.) ಒಣಬೇಸಾಯ ತರಬೇತಿ. | .. | 40 |
| 3. | ಸಹಾಯಕ ಕೃಷಿ ಅಧಿಕಾರಿ (ಭೂಸಂ) ಪುನರವ್ಯಾಸಂಗ ತರಬೇತಿ. | .. | 80 |
| 4. | ಜಿಲ್ಲಾಮಟ್ಟದ ಪೆರಿಪ್ಯಾಟ್ರಿಕ ತರಬೇತಿ. | (ತಂಡ) | 15 |

2. ಭೂಸಾರ ಸಂರಕ್ಷಣೆ ತರಬೇತಿ ಕೇಂದ್ರ, ಬಿಜಾಪುರ:-

ಭೂಸಾರ ಸಂರಕ್ಷಣ ಸಂಬಂಧ ಕ್ರಮಗಳ ಆಧುನಿಕ ತಂತ್ರಜ್ಞಾನದ ಬಗ್ಗೆ ಸೇವೆಯಲ್ಲಿರುವ ಕೃಷಿ ಸಹಾಯಕರಿಗೆ ಸಮಗ್ರ ತರಬೇತಿ ನೀಡುವ ಉದ್ದೇಶದಿಂದ 1958ರಲ್ಲಿ ಬಿಜಾಪುರದಲ್ಲಿ ಸ್ಥಾಪಿಸಲಾಗಿದೆ. ಇಲಾಖೆಯು ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೃಷಿ ಸಹಾಯಕರುಗಳಿಗೆ ಮತ್ತು ಸಹಾಯಕ ಕೃಷಿ ಅಧಿಕಾರಿ (ಭೂಸಾರ ಸಂರಕ್ಷಣೆ)ಗಳಿಗೆ ತರಬೇತಿ ನೀಡುವ ಸಲುವಾಗಿ ಈ ಕೇಂದ್ರವನ್ನು ನಿಯೋಜಿಸಲಾಗಿದೆ.

1994-95ನೇ ಸಾಲಿನ ಕಾರ್ಯಕ್ರಮ ಹಾಗೂ ಪ್ರಗತಿ:-

| ಕ್ರಮ ಸಂಖ್ಯೆ | ವಿವರ | ಗುರಿ | ಸಾಧನೆ |
|---|---|---|---|
| 1. | ಕೃಷಿ ಸಹಾಯಕರುಗಳಿಗೆ(ಭೂ.ಸಂ.) ತರಬೇತಿ. (ಸಂಖ್ಯೆ) | 40 | 41 |
| 2. | ಕೃಷಿ ಸಹಾಯಕರುಗಳ ಪುನರಭ್ಯಾಸಂಗ (ಸಂಖ್ಯೆ) | 60 | 73 |
| 3. | ಸಹಾಯಕ ಕೃಷಿ ಅಧಿಕಾರಿ(ಭೂ.ಸಂ.)ಅಲ್ಪಾವಧಿ ತರಬೇತಿ(ಸಂಖ್ಯೆ) | 80 | — |
| 4. | ಜಿಲ್ಲಾ ಮಟ್ಟದ ಪರಿಪಾಠ್ಯಕ್ರಕ ತರಬೇತಿ (ಸಂಖ್ಯೆ) | 15 | 7)ತಂಡಗಳು 437)ಅಧಿಕಾರಿಗಳು |
| 5. | 1993-94ನೇ ಸಾಲಿನ ಅರ್ಥಿಕ (ಲಕ್ಷ ರೂ.ಗಳಲ್ಲಿ) | 8.18 | 9.21 |

ಮೇಲೆ ಸೂಚಿಸಿದ ತರಬೇತಿಗಳ ಜೊತೆಗೆ ರಾಷ್ಟ್ರೀಯ ಜಲಾನಯನ ಯೋಜನೆಯಡಿಯಲ್ಲಿ ಮಿತ್ರ ಕಿಸಾನ ತರಬೇತಿಯು ಈ ಕೇಂದ್ರದಿಂದ ಕೈಗೊಳ್ಳಲಾಗುತ್ತಿದೆ.

1995–96ನೇ ಸಾಲಿನ ಕಾರ್ಯಕ್ರಮ (ತಾತ್ಕಾಲಿಕ) :–

| ಕ್ರಮ ಸಂಖ್ಯೆ | ವಿ ವ ರ | ಗುರಿ |
|---|---|---|
| 1. | ಕೃಷಿ ಸಹಾಯಕರುಗಳಿಗೆ ಭೂಸಾರ ಸಂರಕ್ಷಣೆ ಬಗ್ಗೆ ನಿಯತಕಾಲಿಕ ತರಬೇತಿ (ಸಂಖ್ಯೆ). | 40 |
| 2. | ಕೃಷಿ ಸಹಾಯಕರುಗಳಿಗೆ ಪುನರ್ವ್ಯಾಸಂಗ ತರಬೇತಿ (ಸಂಖ್ಯೆ) | 80 |
| 3. | ಸಹಾಯಕ ಕೃಷಿ ಅಧಿಕಾರಿಗಳಿಗೆ ಅಲ್ಪಾವಧಿ ತರಬೇತಿ (ಸಂಖ್ಯೆ) | 80 |
| 4. | ಜಿಲ್ಲಾಮಟ್ಟದ ಪೆರಿಪ್ಯಾಟೇಟಿಕ ತರಬೇತಿ. | 15 ತಂಡಗಳಲ್ಲಿ. |

3. <u>ಸಣ್ಣ ನೀರಾವರಿ ಮತ್ತು ನೀರಿನ ಉಪಯೋಗ ತರಬೇತಿ ಕೇಂದ್ರ, ಧಾರವಾಡ</u> :–

ಸಣ್ಣ ನೀರಾವರಿ, ದೊಡ್ಡ ಹಾಗೂ ಮಧ್ಯಮ ನೀರಾವರಿ ಯೋಜನೆಗಳಿಂದ ನೀರಿನ ಉಪಯೋಗ ಕುರಿತು ಹಾಗೂ ಇವುಗಳಿಂದ ಉಂಟಾದ ನೀರಿನ ಅನುಕೂಲಗಳನ್ನು ಪರಿಣಾಮಕಾರಿಯಾಗಿ ಬಳಸುವಂತೆ ರೈತರಿಗೆ ಹಾಗೂ ಇಲಾಖೆಯ ಸೇವೆಯಲ್ಲಿರುವ ಕ್ಷೇತ್ರ ಸಿಬ್ಬಂದಿಗೆ ತರಬೇತಿ ನೀಡುವ ಪ್ರಮುಖ ಉದ್ದೇಶದಿಂದ ಈ ತರಬೇತಿ ಕೇಂದ್ರವನ್ನು 1966ರಲ್ಲಿ ಪ್ರಾರಂಭಿಸಲಾಯಿತು. ಅಲ್ಲದೆ ಅಚ್ಚುಕಟ್ಟು ಪ್ರದೇಶದಲ್ಲಿ ಬರುವ ರೈತರಿಗೆ ಮತ್ತು ಅಧಿಕಾರಿ ಸಿಬ್ಬಂದಿಗೆ ಮುಖ್ಯವಾಗಿ ಈ ಕೆಳಗಿನ ವಿಷಯಗಳ ಮೇಲೆ ತರಬೇತಿ ನೀಡಲಾಗುತ್ತಿದೆ.

1. ಸುವ್ಯವಸ್ಥಿತ ಭೂ ಅಭಿವೃದ್ಧಿ ಜಾಗುಭೂಮಿಯ ಫಲವತ್ತತೆಯನ್ನು ಹೆಚ್ಚಿಸಬಹುದು.

2. ಸುಧಾರಿತ ನೀರಾವರಿ ಪದ್ಧತಿಗಳು.
3. ನೀರನ್ನು ಸುವ್ಯವಸ್ಥಿತ ರೀತಿಯಲ್ಲಿ ಸಾಗಿಸುವ ಮತ್ತು ಹಂಚುವ ವ್ಯವಸ್ಥೆ.
4. ವಿವಿಧ ಬೆಳೆಗಳ ಭೂಮಿ ಹಾಗೂ ಹವಾಮಾನಕ್ಕೆ ತಕ್ಕಂತೆ ನೀರಿನ ನಿರ್ವಹಣೆ.
5. ನೀರಿನ ನಿಯಂತ್ರಣ ಹಾಗೂ ರಚನೆಗಳ ಬಳಕೆ.
6. ಜವಳು, ಉಪ್ಪು ಮತ್ತು ಜೌಗು ಭೂಮಿಯನ್ನು ಕೃಷಿಗೆ ಯೋಗ್ಯವನ್ನಾಗಿ ಮಾಡುವುದು.
7. ನೀರು ಅಳೆಯುವ ಸಾಧನೆಗಳು ಮತ್ತು ಅವುಗಳ ಅಳತೆ.
8. ಕೃಷಿ ಬಸಿಗಾಲುವೆಗಳು.
9. ಕೃಷಿ ಹೊಂಡಗಳು.
10. ಏತ ನೀರಾವರಿ ಮುಂತಾದವುಗಳು.

1994–95ನೇ ಸಾಲಿನ ಕಾರ್ಯಕ್ರಮಗಳು ಮತ್ತು ಪ್ರಗತಿ

| ಕ್ರಮ ಸಂಖ್ಯೆ. | ವಿವರ | | ಗುರಿ | ಸಾಧನೆ |
|---|---|---|---|---|
| 1. | ಸಹಾಯಕ ಕೃಷಿ ಅಧಿಕಾರಿಗಳ ತರಬೇತಿ. | ಸಂಖ್ಯೆ. | 80 | 76 |
| 2. | ಕೃಷಿ ಸಹಾಯಕರ ತರಬೇತಿ. | .. | 100 | 69 |
| 3. | ರೈತರ ತರಬೇತಿ | .. | 1500 | 1546 |
| 4. | ಉಪನ್ಯಾಸಗಳು. | .. | — | 16 |
| 5. | ಕ್ಷೇತ್ರೋತ್ಸವ. | .. | — | 1 |
| 6. | ಪ್ರಕಟಣೆಗಳು. | .. | — | — |
| 7. | ರೈತರಿಗೆ ತಾಂತ್ರಿಕ ಸಲಹೆಗಳು | .. | — | 37 |
| 8. | 1994–95ನೇ ಸಾಲಿನಲ್ಲಿ ಆರ್ಥಿಕ (ಲಕ್ಷ ರೂ.) | | 4.50 | 4.76 |

1995–96ನೇ ಸಾಲಿನ ಕಾರ್ಯಕ್ರಮಗಳು

| ಕ್ರಮ ಸಂಖ್ಯೆ | ವಿ ವ ರ | ಗುರಿ | |
|---|---|---|---|
| | | ತಂಡಗಳ ಸಂಖ್ಯೆ | ಅಭ್ಯರ್ಥಿಗಳ ಸಂಖ್ಯೆ |
| 1. | ಸಹಾಯಕ ಕೃಷಿ ಅಧಿಕಾರಿಗಳ ತರಬೇತಿ. | 05 | 80 |
| 2. | ಕೃಷಿ ಸಹಾಯಕರ ತರಬೇತಿ | 05 | 100 |
| 3. | ರೈತರ ತರಬೇತಿ | 30 | 1500 |

## ರಾಜ್ಯ ಮಣ್ಣು ಪರೀಕ್ಷೆ

ಮಣ್ಣು ಪರೀಕ್ಷೆಯು ಮಣ್ಣಿನ ಬಗ್ಗೆ ವಾಸ್ತವಿಕ ಮಾಹಿತಿಯನ್ನು ಒದಗಿಸುವ ಸಾಧನಗಳಲ್ಲಿ ತಪಶೀಲು ಪಟ್ಟಿಯಾಗಿರುತ್ತದೆ.

1. ಮುಖ್ಯ ಉದ್ದೇಶಗಳು:

ಅ) ಮೂಲತಃ: ಮಣ್ಣಿನ ಉತ್ಪತ್ತಿ, ಬೆಳವಣಿಗೆ, ವರ್ಗೀಕರಣ, ನಾಮಕರಣದ ಬಗೆಗಿನ ಜ್ಞಾನ ಹಾಗೂ ತಿಳುವಳಿಕೆಯನ್ನು ಹೆಚ್ಚಿಸಲು ಪರೀಕ್ಷೆಯು ನೆರವಾಗುತ್ತದೆ.

ಆ) ಪರೀಕ್ಷೆಯ ವಿವರವನ್ನು ವ್ಯಾಖ್ಯಾನ ಮಾಡಿ ಭೂಮಿಯನ್ನು ಕೃಷಿ ಅರಣ್ಯ, ಅಥವಾ ಹುಲ್ಲುಗಾವಲಿಗೆ ಹಾಗೂ ಇತರ ಉಪಯೋಗಗಳಿಗೆ ಯೋಗ್ಯವೇ ಎಂದು ನಿರ್ಧರಿಸಬಹುದು.

ಇ) ಪರೀಕ್ಷೆಯ ವಿವರಗಳನ್ನು ಮಾಡಿ ನೀರಾವರಿ ಸೌಲಭ್ಯ ಹೊಂದಿದ ಭೂಮಿಯ ಉಪಯುಕ್ತತೆಯನ್ನು ನಿರ್ಧರಿಸಬಹುದು.

ಈ) ಮಣ್ಣಿನ ಗುಣಮಟ್ಟಗಳ ನಿರ್ಧಾರದ ನಂತರ ಒಳ್ಳೆಯ ಭೂಮಿಯ ಉಪಯೋಗವನ್ನು ಯೋಜಿಸುವುದಕ್ಕೆ ಮತ್ತು ಸೂಕ್ತ ಬೆಳೆಗಳ ಆಯ್ಕೆ ಮಾಡಲು ಮಾಹಿತಿಯನ್ನು ಒದಗಿಸುತ್ತದೆ.

2. ಈ ಮುಖ್ಯ ಉದ್ದೇಶಗಳ ಸಾಧನೆಗಳಿಗೆ ಮಣ್ಣು ಪರೀಕ್ಷೆ ತಂಡಗಳು, ನಕಾಶೆ ವಿಭಾಗ ಮತ್ತು ಮಣ್ಣು ವಿಶ್ಲೇಷಣೆ ಪ್ರಯೋಗಾಲಯಗಳು ಬೆಂಗಳೂರು ಮತ್ತು ಧಾರವಾಡ ಘಟಕಗಳಲ್ಲಿವೆ.

3. 1994–95ನೇ ಸಾಲಿನ ಕಾರ್ಯಕ್ರಮಗಳು:

1) ಉದ್ದೇಶಿತ ಮಧ್ಯಮ ಹಾಗೂ ಭಾರಿ ನೀರಾವರಿ ಯೋಜನೆ ಅಚ್ಚುಕಟ್ಟು ಪ್ರದೇಶಗಳಲ್ಲಿ ಮಣ್ಣು ಸಮೀಕ್ಷೆ.

2) ಖುಷ್ಕಿ ಭೂ ಅಭಿವೃದ್ಧಿ, ಡ್ಯಾನಿಡಾ ಮತ್ತು ಮಳೆ ಯಾಶ್ರಿತ ರಾಜ್ಯ ಜಲಾನಯನ ಅಭಿವೃದ್ಧಿ ಯೋಜನೆ ಕಾರ್ಯಕ್ರಮದನ್ವಯ ಕೈಗೆತ್ತಿಕೊಳ್ಳಲಾದ ಜಲಾನಯನ ಪ್ರದೇಶಗಳು ಇತ್ಯಾದಿ ಮಣ್ಣಿನ ಸಮೀಕ್ಷೆ.

3) ಪ್ರಯೋಗಾಲಯದಲ್ಲಿ ಮಣ್ಣು ಮಾದರಿಗಳ ವಿಶ್ಲೇಷಣೆ ಕೈಗೊಳ್ಳುವುದು.

4) ಮಣ್ಣುಸಮೀಕ್ಷೆ ಮಾಡಿದ ಪ್ರದೇಶಗಳ ವರದಿ ಬಿಡುಗಡೆ.

ಭೌತಿಕ:

| | ಗುರಿ | ಸಾಧನೆ | ಷರಾ |
|---|---|---|---|
| 1) ಕ್ಷೇತ್ರ ಮಣ್ಣು ಸಮೀಕ್ಷೆ (ಹೆ) | 58,000 | 40880 (ವಿ.ಮ.ಸ) 16255 (ಸಾಧ.ಮ.ಸ) | 1) ತುಂಗಾ ಮೇಲ್ದಂಡೆ ಯೋಜನೆ ರೀಚ್–3<br>2) ಕಣ್ವ ನೀರಾವರಿ ಯೋಜನೆ<br>3) ಗಕ್ಕಲಾಪುರ ಉಪ ಜಲಾನಯನ<br>4) ಮಾರ್ಕಂಡೇಯ ನೀರಾವರಿ ಯೋಜನೆ.<br>5) ಶಿಂಗಟಲೂರು ಏತ ನೀರಾವರಿ<br>6) ಹಿರೇಹಳ್ಳ ಜಲಾನಯನ |
| 2) ಮಣ್ಣು ಮಾದರಿಗಳ ವಿಶ್ಲೇಷಣೆ (ಸಂಖ್ಯೆ) | 2,400 | 2420 | —''— |

## 1995–96ನೇ ಸಾಲಿನ ಉದ್ದೇಶಿತ ಕಾರ್ಯಕ್ರಮಗಳು

ಭೌತಿಕ:

| | ಬೆಂಗಳೂರು ಘಟಕ | ಧಾರವಾಡ ಘಟಕ | ಒಟ್ಟು | ಷರಾ |
|---|---|---|---|---|
| 1) ಕ್ಷೇತ್ರ ಮಣ್ಣು ಸಮೀಕ್ಷೆ(ಹೆ) | 25200 | 33600 | 58800 | 1) ಮಾರ್ಕಂಡೇಯ ನೀರಾವರಿ ಯೋಜನೆ<br>2) ಕಾರಂಜ ನೀರಾವರಿ ಯೋಜನೆ<br>3) ಮಾಂಜ್ರಾ ನೀರಾವರಿ<br>4) ಇತರೆ ಆದ್ಯತೆ ಪ್ರದೇಶ |
| 2) ಮಣ್ಣು ಮಾದರಿಗಳ ವಿಶ್ಲೇಷಣೆ (ಸಂಖ್ಯೆ) | 1200 | 1200 | 2400 | 1) ಹಿರೇಹಳ್ಳ ಜಲಾನಯನ<br>2) ಹಕ್ಕಲಾಪುರ ಉಪ ಜಲಾನಯನ<br>3) ಮಾರ್ಕಂಡೇಯಾ ನೀರಾವರಿ ಯೋಜನೆ<br>4) ಸಿಂಗಟಲೂರು ಏತ ನೀರಾವರಿ ಯೋಜನೆ |

5) [illegible] ನೀರಾವರಿ ಯೋಜನೆ

6) ಕಾರಂಜಾ ನೀರಾವರಿ ಯೋಜನೆ

| | | | | |
|---|---|---|---|---|
| 3) ವರದಿಗಳ ಬಟವಾಡೆ (ಸಂಖ್ಯೆ) | 03 | 02 | 05 | 1) ಕೃಷ್ಣಾ ನೀರಾವರಿ ಯೋಜನೆ<br>2) ಹಿರೇಹಳ್ಳ ಜಲಾನಯನ<br>3) ಸಕ್ಕಲಾಪುರ ಏತ ಜಲಾನಯನ<br>4) ಸಿಂಗಟಲೂರು ಏತ ನೀರಾವರಿ ಯೋಜನೆ<br>5) ಮಲಪ್ರಭಾ ನೀರಾವರಿ ಯೋಜನೆ |



ಆರ್ಥಿಕ: <u>1995–96ನೇ ಸಾಲಿನ ಅನುದಾನ</u>

| | | ಅನುದಾನ (ರೂ.ಗಳಲ್ಲಿ) |
|---|---|---|
| 1) ಅಧಿಕಾರಿ ವೇತನ | .. | 1,56,000–00 |
| 2) ಸಿಬ್ಬಂದಿ ವೇತನ | .. | 17,00,000–00 |
| 3) ತುಟ್ಟಿಭತ್ಯೆ | .. | 17,00,000–00 |
| 4) ಇತರೆ ಬಾಬ್ತು | .. | 4,02,000–00 |
| 5) ಪ್ರವಾಸ ಭತ್ಯೆ | .. | 1,00,000–00 |
| 6) ಕಚೇರಿ ವೆಚ್ಚ | .. | 4,00,000–00 |
| | ಒಟ್ಟು | 44,58,000–00 |

ಮೇಲ್ಕಂಡ ಕಾರ್ಯವಲ್ಲದೇ ಉಪ ಕೃಷಿ ನಿರ್ದೇಶಕರು (ರಾಜ್ಯ ಮಣ್ಣು ಸಮೀಕ್ಷೆ), ಬೆಂಗಳೂರು, ಇವರು ಈ ಕೆಳಕಂಡ ಹೆಚ್ಚಿನ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾರೆ.

1) ಮಣ್ಣು ಸಮೀಕ್ಷೆ ಸಮನ್ವಯ ಸಮಿತಿ ಸದಸ್ಯ ಕಾರ್ಯದರ್ಶಿಗಳಾಗಿ ಕೆಲಸ ನಿರ್ವಹಿಸುತ್ತಾರೆ.

2) ರಾಷ್ಟ್ರೀಯ ಮಣ್ಣು ಸರ್ವೇಕ್ಷಣಾ ಮತ್ತು ಭೂ ಉಪಯೋಗ ಸಂಸ್ಥೆ, ನಾಗಪುರ, ಇವರ ಸಹಯೋಗದ ಕೊ-ಆರ್ಡಿನೇಟರರಾಗಿರುತ್ತಾರೆ.

3) ವಿವಿಧ ಜಿಲ್ಲೆಗಳ ದ್ವೈಮಾಸಿಕ ಕೃಷಿ ವಿಸ್ತರಣಾ ಯೋಜನೆ ಮಾಸಿಕ ಕಾರ್ಯಾಗಾರದಲ್ಲಿ ನಿರ್ದೇಶನಾಲಯದಿಂದ ವೀಕ್ಷಕರಾಗಿ ಭಾಗವಹಿಸಬೇಕಾಗಿದೆ.

4) ಇತರ ಕೆಲಸಗಳು ಸಮಯಾನುಸಾರ ವಹಿಸಿದಂತೆ.

1995—96ರ ಒತ್ತು ಕಾರ್ಯಕ್ರಮಗಳು:

1995—96ನೇ ಸಾಲಿನಲ್ಲಿ 88.00 ಲಕ್ಷ ಟನ್ನುಗಳ ಆಹಾರ ಧಾನ್ಯ ಉತ್ಪಾದನೆಯ ಗುರಿಯನ್ನು ನಿಗದಿಪಡಿಸಿಕೊಳ್ಳಲಾಗಿದ್ದು ಈ ಪೈಕಿ 80.55 ಲಕ್ಷ ಟನ್ನುಗಳ ಏಕದಳ ಧಾನ್ಯ ಮತ್ತು 7.45 ಲಕ್ಷ ಟನ್ನುಗಳ ದ್ವಿದಳ ಧಾನ್ಯಗಳಾಗಿವೆ. ಎಣ್ಣೆಕಾಳು ಉತ್ಪಾದನೆಯನ್ನು 19.00 ಲಕ್ಷ ಟನ್ನುಗಳೆಂದು ನಿಗದಿಪಡಿಸಿದ್ದು ಹಾಗೂ ಇತರೆ ಬೆಳೆಗಳಾದ ಹತ್ತಿ, ಕಬ್ಬು, ಮತ್ತು ತಂಬಾಕಿನ ಉತ್ಪಾದನಾ ಗುರಿಯನ್ನು ಕ್ರಮವಾಗಿ 9.00 ಲಕ್ಷ ಬೇಲ್ಸ್ 263.36 ಲಕ್ಷ ಟನ್ ಮತ್ತು 0.53 ಲಕ್ಷ ಟನ್ ಎಂದು ನಿಗದಿ ಪಡಿಸಲಾಗಿದೆ.

2) ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹೆಚ್ಚು ಮಹತ್ವವನ್ನು ನೀಡಿ 1994—95ರಲ್ಲಿ ಜಾರಿಯಲ್ಲಿದ್ದ ಎಲ್ಲಾ ಕಾರ್ಯಕ್ರಮಗಳನ್ನು ಮುಂದುವರಿಸಲಾಗುವುದು.

3) ಕೃಷಿ ಬೆಳೆಗಳ ಉತ್ಪಾದನೆ ಹಾಗೂ ಪ್ರತಿ ಹೆಕ್ಟೇರಿನ ಇಳುವರಿಯನ್ನು ಹೆಚ್ಚಿಸುವ ಸಲುವಾಗಿ ಈ ಕೆಳಕಂಡ ಒತ್ತು ಕಾರ್ಯಕ್ರಮಗಳನ್ನು 1995—96ರಲ್ಲೂ ಸಹ ಮುಂದುವರಿಸಲಾಗುವುದು.

ಅ) ಎಣ್ಣೆಕಾಳು ಉತ್ಪಾದನಾ ಕಾರ್ಯಕ್ರಮ

ಆ) ರಾಷ್ಟ್ರೀಯ ದ್ವಿದಳ ಧಾನ್ಯ ಅಭಿವೃದ್ಧಿ

ಇ) ಸಮಗ್ರ ಏಕದಳ ಧಾನ್ಯಗಳ ಅಭಿವೃದ್ಧಿ ಕಾರ್ಯಕ್ರಮ (ಒರಟು ಧಾನ್ಯಗಳು)

ಈ) ತೀವ್ರ ಹತ್ತಿ ಅಭಿವೃದ್ಧಿ ಕಾರ್ಯಕ್ರಮ

ಉ) ಸಮಗ್ರ ಕೀಟ ನಿರ್ವಹಣೆ

ಊ) ಅಧಿಕ ಇಳುವರಿ ತಳಿಗಳ ಕಾರ್ಯಕ್ರಮಗಳು.

4) ಕೃಷಿ ವಿಸ್ತರಣೆ ಮತ್ತು ತರಬೇತಿಯ ಅಂಗವಾಗಿ ಡ್ಯಾನಿಡಾ ನೆರವಿನ ಪ್ರೊಜೆಕ್ಟ್-11ನ್ನು ಮುಂದುವರಿಸಲಾಗುವುದು. ಇದರಡಿಯಲ್ಲಿ ರೈತ ಮಹಿಳೆ ಮತ್ತು ವಿಸ್ತರಣಾ ಕಾರ್ಯಕರ್ತರ ಅವಶ್ಯಕತೆಗಳಿಗೆ ಆದ್ಯ ಗಮನ ನೀಡಲಾಗಿದೆ.

5) ವಿಶೇಷ ಘಟಕ ಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಇವುಗಳ ಅನುಷ್ಠಾನಕ್ಕಾಗಿ ಹೆಚ್ಚಿನ ಆದ್ಯತೆ ನೀಡಿ ಈ ಪಂಗಡಗಳ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಯನ್ನು ಉತ್ತಮಪಡಿಸುವ ಕಾರ್ಯಕ್ರಮಗಳನ್ನು ಮುಂದುವರಿಸಲಾಗುವುದು.

6) ನ್ಯಾಚುರಲ್ ಫಾರಮಿಂಗ ಯೋಜನೆಯನ್ನು 1995-96ರಲ್ಲಿ ಮುಂದುವರಿಸಲಾಗುವುದು.

ಹೊಸ ಕಾರ್ಯಕ್ರಮಗಳು:

1) ಬಯಲು ಸೀಮೆ ಅಭಿವೃದ್ಧಿ ಮಂಡಳಿ
2) ಸಮಗ್ರ ಕೃಷಿ ಅಭಿವೃದ್ಧಿ ಯೋಜನೆ
3) ನಿರ್ದೇಶನಾಲಯದಲ್ಲಿ ಕೀಟ:ರೋಗ ಮಾದರಿಗಳ ವಸ್ತು ಸಂಗ್ರಹಾಲಯ ಸ್ಥಾಪನೆ.
4) ಗುಲ್ಬರ್ಗಾದಲ್ಲಿ ಜೈವಿಕ ನಿಯಂತ್ರಣ ಪ್ರಯೋಗಾಲಯ (ಶೇ 100ರ ಕೇಂದ್ರದ ನೆರವು)
5) ಕಬ್ಬು ಆಧಾರಿತ ಬೆಳೆ ಪದ್ಧತಿ ಅಭಿವೃದ್ಧಿ ಯೋಜನೆ
6) ಉನ್ನತ ವ್ಯಾಸಂಗಕ್ಕಾಗಿ ಅಧಿಕಾರಿಗಳು ಹಂಗಾಮಿ ಸಿಬ್ಬಂದಿಗಳ ನಿಯೋಜನೆ.
7) ಹೋಬಳಿ ಮಟ್ಟದಲ್ಲಿ ಬೆಳೆ ವಿಮಾ ಯೋಜನೆಗೆ ಸಾಂಖ್ಯಿಕ ವಿಭಾಗದ ಸೃಜನೆ
8) ಗಿರಿಜನ ಉಪಯೋಜನೆ
9) ರೈತರಿಗೆ ಪವರ್‌ಟಿಲ್ಲರ್‌ಗಳ ಪೂರೈಕೆ
10) ಚೌಳು:ಉಪ್ಪು ಹಾಗೂ ಕ್ಷಾರ ಭೂಮಿಗಳನ್ನು ಕೃಷಿ ಯೋಗ್ಯ ಮಾಡುವಿಕೆ.

೪೯ ಬುಲ್ಡೋಜರ್ ಯಂತ್ರಗಳನ್ನು ಹೊಂದಿದ್ದು, ರೈತ ಸಮುದಾಯಕ್ಕೆ ಸೌಲಭ್ಯಗಳನ್ನು ಒದಗಿಸುತ್ತಿದೆ. ಅಲ್ಲದೆ ಕೃಷಿ ಮತ್ತು ಅರಣ್ಯ ಇಲಾಖೆಗಳಲ್ಲಿ ಅರಣ್ಯೀಕರಣ ಕೈಗೊಳ್ಳಲು ಭೂ ಸ್ಥಿರಗೊಳಿಸಲು, ಬದುಗಳ ನಿರ್ಮಾಣ, ಭೂ ಸಂರಕ್ಷಣೆ ಭೂ ಮಟ್ಟ ಮತ್ತು ರೂಪಿಸಲು ಸೌಲಭ್ಯಗಳನ್ನು ಒದಗಿಸುತ್ತಿದೆ. ಅಲ್ಲದೆ, ನಿಗಮವು ಈ ಎಲ್ಲಾ ಚಟುವಟಿಕೆಗಳ ಜೊತೆಗೆ ''ಟರ್ನ್ ಕೀ'' ಆಧಾರದ ಮೇಲೆ ಕೆರೆಗಳಲ್ಲಿ ಹೂಳೆತ್ತುವುದು. ಮತ್ತು, ಸಣ್ಣ ನೀರಾವರಿ ಯೋಜನೆಗಳನ್ನು ತೆಗೆದುಕೊಳ್ಳುವ ಯೋಜನೆಯುರುತ್ತದೆ. ನಿಗಮದ ಪರಿಕರ ವಿಭಾಗವು, ಬೀಜ, ರಸಗೊಬ್ಬರ ಹಾಗೂ ಸಸ್ಯ ಸಂರಕ್ಷಣಾ ರಾಸಾಯನಿಕಗಳ ವಿತರಣೆಯನ್ನು ಮುಂದುವರಿಸಿಕೊಂಡು ಹೋಗುವುದರ ಜೊತೆಗೆ, ಜೀವಾಣು ತಾಂತ್ರಿಕತೆ ಚಟುವಟಿಕೆಗಳಾದ ಟಿಶ್ಯು ಕಲ್ಚರ್, ಜೀವಾಣು ಗೊಬ್ಬರಗಳು, ಜೀವಾಣು ಪೀಡೆನಾಶಕಗಳು, ಜೈವಿಕ ಗೊಬ್ಬರ ಮುಂತಾದ ಕ್ಷೇತ್ರಗಳಲ್ಲಿ ನಿಗಮವು ಭಾಗವಹಿಸುವ ಯೋಜನೆ ಇರುತ್ತದೆ.

ಕೃಷಿ ಉಪಕರಣಗಳ ಸರಬರಾಜಿಗೆ ಸಂಬಂಧಿಸಿದಂತೆ ನಿಗಮವು ರಾಜ್ಯಮಟ್ಟದ ''ಕಮಿಟಿ ಫಾರ್ ಟೆಸ್ಟಿಂಗ್ ಅಂಡ ರಿಲೀಸಿಂಗ್ ಅಗ್ರಿಕಲ್ಚರಲ್ ಇಂಪ್ಲಿಮೆಂಟ್ಸ್'' ಸಮಿತಿಯು ಬಿಡುಗಡೆ ಮಾಡುವ ಎಲ್ಲಾ ರೀತಿಯ ಕೃಷಿ ಉಪಕರಣಗಳನ್ನು ದೊಡ್ಡ ಪ್ರಮಾಣದಲ್ಲಿ ತಯಾರಿಸಿ ಆಗ್ರೋ ಕೇಂದ್ರಗಳ ಮೂಲಕ ರೈತರಿಗೆ ದೊರಕಿಸಿ ಕೊಡುತ್ತದೆ. ವಿವಿಧ ಕೇಂದ್ರ ಪುರಸ್ಕೃತ ಯೋಜನೆ ಹಾಗೂ ರಾಜ್ಯ ಘಟಕ ಯೋಜನೆಗಳಡಿಯಲ್ಲಿ ಕೃಷಿ ಯಂತ್ರೋಪಕರಣಗಳ ಮತ್ತು ಉಪಕರಣಗಳ ತಯಾರಿಕೆ ಹಾಗೂ ಜನಪ್ರಿಯಗೊಳಿಸಿದ ಕಾರ್ಯಗತಗೊಳಿಸಲು ಕರ್ನಾಟಕ ಕೃಷಿ ಕೈಗಾರಿಕಾ ನಿಗಮವನ್ನು ಸಂಪರ್ಕ ಸಂಸ್ಥೆಯನ್ನಾಗಿ ಮಾಡಲು ರಾಜ್ಯ ಸರ್ಕಾರವು ಪರಿಗಣಿಸಿರುತ್ತದೆ.

ಕರ್ನಾಟಕ ಕೈಗಾರಿಕಾ ನಿಗಮದ ರಾಯಚೂರಿನಲ್ಲಿ ಒಂದು ಪೆಸ್ಟಿಸೈಡ್ ಫಾರ್ಮುಲೇಶನ್ ಘಟಕವನ್ನು ಹೊಂದಿದ್ದು ಇದು ವಾರ್ಷಿಕ 2 ಲಕ್ಷ ಲೀಟರ ದ್ರವೀಕೃತ ಔಷಧ ಮತ್ತು 500 ಮೆಟ್ರಿಕ್ ಟನ್‌ಗಳಷ್ಟು ಪುಡೀಕೃತ ಔಷಧವನ್ನು ತಯಾರಿಸುವ ಸಾಮರ್ಥ್ಯವನ್ನು ಹೊಂದಿದೆ. ಈ ಘಟಕವು ರೈತರಿಗೆ ಅಗತ್ಯವಿರುವ ಗುಣಮಟ್ಟದ ಕೃಷಿ ಕೀಟನಾಶಕಗಳನ್ನು ತಯಾರಿಸಿ ವಿತರಣೆ ಮಾಡುತ್ತಿರುತ್ತದೆ. ಇದರ ಯಶಸ್ಸಿನಿಂದ ರಾಜ್ಯ ಸರ್ಕಾರದ ಇದರ ಉತ್ಪಾದನಾ ಸಾಮರ್ಥ್ಯವನ್ನು ಶೇ. 100 ಕ್ಕೆ ಹೆಚ್ಚಿಸಲು ನಿರ್ಧರಿಸಿದೆ ಮತ್ತು ಹಾಸನದಲ್ಲಿ 20.00 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಇನ್ನೊಂದು ಕ್ರಿಮಿನಾಶಕ ಘಟಕ. ವನ್ನು ಅದೇ ವಾರ್ಷಿಕ ಸಾಮರ್ಥ್ಯ ಉತ್ಪಾದನೆಗಾಗಿ ಸ್ಥಾಪಿಸಲು ನಿರ್ಧರಿಸಿದೆ.

ತಾಳಗುಪ್ಪದಲ್ಲಿರುವ ರಾಜ್ಯ ರೇಷ್ಮೆ ಸಂಶೋಧನಾ ಸಂಸ್ಥೆಯಿಂದ ತಯಾರಿಕಾ ಹಕ್ಕನ್ನು ಖರೀದಿಸಿಕೊಂಡು, ''ಗ್ರಾಸರಿ ಮತ್ತು ಫ್ಲಾಸಿರಿ'' ರೋಗಗಳಿಗೆ ತುತ್ತಾದ ಹುಳುಗಳನ್ನು ಉಪಚರಿಸಲು ಬಳಸುವ 'ಎ' ಮತ್ತು 'ಬಿ' ದರ್ಜೆಯ ಉತ್ಪಾದನೆ ಮತ್ತು ವಿತರಣೆಯನ್ನು ಗಳಿಸಿಕೊಂಡು ಈ ನಿಗಮವು ರೇಷ್ಮೆ ಅಭಿವೃದ್ಧಿ ಕ್ಷೇತ್ರವನ್ನು ಪ್ರವೇಶಿಸಿರುತ್ತದೆ. ಇದಲ್ಲದೆ ನಿಗಮವು, ಭಾರತ ಸರ್ಕಾರದ ಒಂದು ಉದ್ದಿಮೆಯಾದ ಮೆ: ಹಿಂದೂಸ್ತಾನ್ ಆರ್ಗ್ಯಾನಿಕ್ ಕೆಮಿಕಲ್ಸ್ ಲಿ., ಬಾಂಬೆ ಇವರಿಂದ ಅನನ್ಯ ವಿತರಣಾ ಹಕ್ಕನ್ನು ಪಡೆದಿರುತ್ತದೆ. ಇದರಿಂದ ಖಾಸಗಿ ಸಂಸ್ಥೆಯವರು ಮಾರಾಟ ಮಾಡುತ್ತಿದ್ದ ಕಡಿಮೆ ಗುಣಮಟ್ಟದ ಫಾರ್ಮಲಿನ್ ದ್ರಾವಣವನ್ನು ತಪ್ಪಿಸಿ ಒಳ್ಳೆಯ ಗುಣಮಟ್ಟದ ಫಾರ್ಮಾಲಿನ್ ದ್ರಾವಣವು ರೈತರಿಗೆ ದೊರೆಯುತ್ತಿರುತ್ತದೆ.

ಪ್ರಸ್ತುತ ಒಳಸಂತ ಯೋಜನೆಯಮತ್ತು ಮಾನವ ಶಕ್ತಿಯನ್ನು ಉಪಯೋಗಿಸಿಕೊಂಡು ಕೃಷಿ ಕೈಗಾರಿಕಾ ನಿಗಮದ ಚಟುವಟಿಕೆಗಳನ್ನು ವಿವಿಧ ರೀತಿಯಲ್ಲಿ ವಿಸ್ತರಿಸಲು ಯೋಜಿಸಲಾಗಿದೆ.

## ಕರ್ನಾಟಕ ರಾಜ್ಯ ಬೀಜ ನಿಗಮ

1) ಮೂಲಾಲ ಬೀಜೋತ್ಪಾದನಾ ಕಾರ್ಯಕ್ರಮ:—

1994—95ನೇ ಸಾಲಿನಲ್ಲಿ ನಿಗಮವು 724.0 ಹೆಕ್ಟೇರ್ ಪ್ರದೇಶದಲ್ಲಿ ಮೂಲಾಲ ಬೀಜೋತ್ಪಾದನಾ ಕಾರ್ಯ ಕ್ರಮ ಹಾಕಿಕೊಂಡಿದ್ದು ಇದರ ಅನ್ವಯ 1994—95ನೇ ಸಾಲಿನಲ್ಲಿ 676 ಹೆಕ್ಟೇರ್ ಪ್ರದೇಶದಲ್ಲಿ ಬೀಜೋತ್ಪಾದನಾ ಕಾರ್ಯ ಕ್ರಮ ಕೈಗೊಂಡಿದ್ದು ಇದು ಶೇ.93ರಷ್ಟು ಪ್ರಗತಿಯನ್ನು ಸಾಧಿಸಿದಂತಾಗಿದೆ. ಈ ಒಂದು ಕಾರ್ಯ ಕ್ರಮದಿಂದ 5450 ಕ್ವಿಂಟಾಲ್ ಬೀಜೋತ್ಪಾದನೆಯನ್ನು ನಿರೀಕ್ಷಿಸಿದ್ದು 6971 ಕ್ವಿಂಟಾಲ್‌ಗಳಷ್ಟು ಬೀಜ ಖರೀದಿಸಲಾಗಿದೆ. ಇದು ಶೇಕಡಾ 128ರಷ್ಟು ಪ್ರಗತಿ ಸಾಧಿಸಿದಂತಾಗಿದೆ.

2) ಪ್ರಮಾಣಿತ ಬೀಜೋತ್ಪಾದನಾ ಕಾರ್ಯಕ್ರಮ:—

1994—95ನೇ ಸಾಲಿನಲ್ಲಿ ನಿಗಮವು 10230 ಹೆಕ್ಟೇರ್ ಪ್ರದೇಶದಲ್ಲಿ ಬೀಜೋತ್ಪಾದನಾ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು, ಪ್ರತಿಯಾಗಿ 12821 ಹೆಕ್ಟೇರ್ ಪ್ರದೇಶಗಳಲ್ಲಿ ಬೀಜೋತ್ಪಾದನಾ ಕಾರ್ಯಕ್ರಮವನ್ನು ಸಾಧಿಸಲಾಗಿದ್ದು, ಅದು ಶೇ.117ರಷ್ಟು ಪ್ರಗತಿಯನ್ನು ಸಾಧಿಸಿದಂತಾಗಿದೆ. ಈ ಒಂದು ವಿಸ್ತೀರ್ಣದಲ್ಲಿ 150485 ಕ್ವಿಂಟಾಲ್‌ಗಳಷ್ಟು ಬೀಜಗಳನ್ನು ಖರೀದಿಸುವ ಕಾರ್ಯ ಕ್ರಮ ಹಮ್ಮಿಕೊಂಡಿದ್ದು, 120155 ಕ್ವಿಂಟಾಲ್‌ಗಳಷ್ಟು ಬೀಜಗಳನ್ನು ಖರೀದಿಸಲಾಗಿದೆ. ಇದರಿಂದ ಶೇ.84ರಷ್ಟು ಪ್ರಗತಿ ಸಾಧಿಸಿದಂತಾಗಿದೆ.

3) 1993–94ನೇ ಸಾಲಿನ ಬೀಜ ವಿತರಣಾ ಕಾರ್ಯಕ್ರಮ:—

ಕರ್ನಾಟಕ ರಾಜ್ಯ ಬೀಜ ನಿಗಮವು 1994–95ನೇ ಸಾಲಿನ ಮುಂಗಾರು:ಹಿಂಗಾರು ಮತ್ತು ಬೇಸಿಗೆ ಹಂಗಾಮುಗಳನ್ನೊಳಗೊಂಡು ಒಟ್ಟಾರೆ 130000 ಕ್ವಿಂಟಾಲ್‌ಗಳಷ್ಟು ವಿವಿಧ ಬೆಳೆ ತಳಿಗಳ ಬೀಜಗಳನ್ನು ರಾಜ್ಯದ ರೈತರಿಗೆ ವಿತರಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಇದಕ್ಕೆ ಪ್ರತಿಯಾಗಿ ಒಟ್ಟು 120184 ಕ್ವಿಂಟಾಲ್‌ಗಳಷ್ಟು ವಿವಿಧ ಬೆಳೆ ತಳಿಗಳ ಬೀಜವನ್ನು ನಿಗಮವು ವಿತರಣೆ ಮಾಡಿರುತ್ತದೆ. ಇದರಿಂದ ಶೇ. 92ರಷ್ಟು ಪ್ರಗತಿಯನ್ನು ಸಾಧಿಸಿದಂತಾಗಿದೆ. ಈ ಬೀಜ ವಿತರಣಾ ಕಾರ್ಯಕ್ರಮವು ನಿಗಮಕ್ಕೆ ಸುಮಾರು 1910 ಲಕ್ಷ ರೂ.ಗಳಷ್ಟು ಆರ್ಥಿಕ ವಹಿವಾಟನ್ನು ಒದಗಿಸುತ್ತದೆ. ನಿಗಮದ ಆರ್ಥಿಕ ವಹಿವಾಟು 1993–94ರಲ್ಲಿ ಪೂರ್ಣ ಸಾಲಿಗೆ 1523 ಲಕ್ಷ ರೂ.ಗಳಷ್ಟು ಇತ್ತು.

4) 1995–96ನೇ ಸಾಲಿನ ಬೀಜ ವಿತರಣಾ ಕಾರ್ಯಕ್ರಮ:—

ನಿಗಮವು 1994–95ನೇ ಸಾಲಿನಲ್ಲಿ ರಾಜ್ಯದ ರೈತರಿಗೆ 1,40,000 ಕ್ವಿಂಟಾಲ್‌ಗಳಷ್ಟು ವಿವಿಧ ಬಿತ್ತನೆ ಬೀಜಗಳನ್ನು ವಿತರಣೆ ಮಾಡುವ ಕಾರ್ಯಕ್ರಮವನ್ನು ಹಮ್ಮಿಕೊಂಡಿರುತ್ತದೆ. ಇದಲ್ಲದೆ ನಿಗಮವು ಪ್ರತಿ ವರ್ಷದಂತೆ ಈ ವರ್ಷವೂ ರಾಜ್ಯದಲ್ಲಿ ಕೃಷಿ ಇಲಾಖೆಯು ಹಮ್ಮಿಕೊಳ್ಳುವ ಯೋಜನೆಗಳಾದ ಸಮಗ್ರ ಏಕದಳ ಧಾನ್ಯ ಅಭಿವೃದ್ಧಿ ಯೋಜನೆ, ಬೇಳೆಕಾಳು ಹಾಗೂ ಎಣ್ಣೆಕಾಳು ಅಭಿವೃದ್ಧಿ ಯೋಜನೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲಿದೆ.

## ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆ

ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆಯು ಬೀಜ ಕಾಯಿದೆಯ ವಿಭಾಗ-8ರ ಅಡಿಯಲ್ಲಿ 1974ರಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರಾರಂಭವಾಗಿದ್ದು, ಅಧಿಸೂಚನೆ ಮಾಡಿದ ತಳಿಗಳ ಬಿತ್ತನೆ ಬೀಜಗಳ ಗುಣಮಟ್ಟವನ್ನು ನಿಯಂತ್ರಿಸುವ ಗುರುತರ ಜವಾಬ್ದಾರಿಯನ್ನು ಆರಂಭಗೊಂಡ ದಿನದಿಂದ ದಕ್ಷತೆಯಿಂದ ನಿರ್ವಹಿಸುತ್ತಾ ಬಂದಿದೆ.

ಈ ಸಂಸ್ಥೆಯು ಕರ್ನಾಟಕ ಸಂಘದ ನೋಂದಾವಣೆ ಕಾಯಿದೆ 1960ರ ಪ್ರಕಾರ ನೋಂದಾಯಿಸಲ್ಪಟ್ಟು ಸೇವಾ ಮನೋಭಾವವೇ ಮುಖ್ಯ ಧ್ಯೇಯವಾಗಿದ್ದು ಸ್ವತಂತ್ರ ಘಟಕವಾಗಿ ಸೇವಾ ಶುಲ್ಕದಿಂದ ಬಂದಂತಹ ಹಣದಿಂದ ತನ್ನ ಎಲ್ಲಾ ಖರ್ಚುಗಳನ್ನು ನಿರ್ವಹಿಸುತ್ತಾ ಬಂದಿದೆ. ಬೀಜ ಪ್ರಮಾಣನಕ್ಕೆ ನೋಂದಾಯಿಸಿದ ವಿಸ್ತೀರ್ಣ:-

1994-95ನೇ ಸಾಲಿನಲ್ಲಿ ಮಾರ್ಚ್ 94ರ ಅಂತ್ಯಕ್ಕೆ ಒಟ್ಟು 21,299.68 ಹೆಕ್ಟೇರ್ ಪ್ರದೇಶವನ್ನು ವಿವಿಧ ಬೆಳೆಗಳ ಅಡಿಯಲ್ಲಿ ಪ್ರಮಾಣನಕ್ಕೆ ನೋಂದಾಯಿಸಲಾಗಿದೆ.

ಬೀಜ ಪ್ರಮಾಣನಕ್ಕೆ ನೋಂದಾಯಿಸಿದ ಸಂಸ್ಥೆವಾರು ವಿಸ್ತೀರ್ಣ:-

| ಸಂಸ್ಥೆ | ವಿಸ್ತೀರ್ಣ (ಹೆಕ್ಟೇರುಗಳಲ್ಲಿ) |
|---|---|
| 1. ಕರ್ನಾಟಕ ರಾಜ್ಯ ಬೀಜ ನಿಗಮ (ನಿ) | 11,073.83 |
| 2. ರಾಷ್ಟ್ರೀಯ ಬೀಜ ನಿಗಮ (ನಿ) | 2,567.83 |
| 3. ಕರ್ನಾಟಕ ರಾಜ್ಯ ಕೃಷಿ ಇಲಾಖೆ | 1,101.40 |
| 4. ಕೇಂದ್ರ, ರಾಜ್ಯ ಕೃಷಿ ಕೇಂದ್ರ | 733.30 |

| | | |
|---|---|---|
| 5. | ಕರ್ನಾಟಕ ರಾಜ್ಯ ತೋಟಗಾರಿಕಾ ಇಲಾಖೆ | 20·80 |
| 6. | ಕೃಷಿ ವಿಶ್ವವಿದ್ಯಾನಿಲಯ | 2·00 |
| 7. | ಕರ್ನಾಟಕ ಎಣ್ಣೆಕಾಳು ಮಹಾ ಮಂಡಳಿ | 306·60 |
| 8. | ಕಾಡಾ | 67·10 |
| 9. | ಖಾಸಗಿ ಬೀಜೋತ್ಪಾದಕರು | 5,426·82 |
| | ಒಟ್ಟು | 21,299·68 |

ಪ್ರಮಾಣೀಕರಿಸಿದ ಬಿತ್ತನೆ ಬೀಜಗಳ ಪ್ರಮಾಣ:—

ವಿವಿಧ ಬೆಳೆಗಳ ಒಟ್ಟು 1,74,000 ಕ್ವಿಂಟಾಲು ಬೀಜವನ್ನು ಪ್ರಮಾಣೀಕರಿಸಿ ರೈತರಿಗೆ ಒದಗಿಸಿಕೊಡಲಾಗಿದೆ.

ಬಿತ್ತನೆ ಬೀಜ ಮಾದರಿಗಳ ವಿಶ್ಲೇಷಣೆ:—

1994—95ನೇ ಸಾಲಿನಲ್ಲಿ ಒಟ್ಟು 15,035 ಮಾದರಿಗಳನ್ನು ವಿಶ್ಲೇಷಣೆ ಮಾಡಲಾಗಿದೆ.

ಆಡಳಿತ ವಿಷಯಗಳು:—

ಈ ಸಂಸ್ಥೆಯ ಕೇಂದ್ರ ಸ್ಥಾನವು ಬೆಂಗಳೂರಿನಲ್ಲಿದ್ದು ವಲಯ ಕೇಂದ್ರಗಳು, ಹೆಬ್ಬಾಳ, ಹಾವೇರಿ, ಗುಲ್ಬರ್ಗಾ, ಧಾರವಾಡ, ಮೈಸೂರು, ಚಿಕ್ಕಬಳ್ಳಾಪುರ, ದಾವಣಗೆರೆ, ಬಳ್ಳಾರಿ ಮತ್ತು ಬಾಗಲಕೋಟೆಯಲ್ಲಿರುತ್ತವೆ. ಕೇಂದ್ರ ಸ್ಥಾನದಲ್ಲಿ ನಿರ್ದೇಶಕರಿಗೆ ಜಂಟಿ ಬೀಜ ಪ್ರಮಾಣನ ನಿರ್ದೇಶಕರು ಹಾಗೂ ಒಬ್ಬ ಸಹಾಯಕ ಬೀಜ ಪ್ರಮಾಣನ ನಿರ್ದೇಶಕರು ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಪ್ರತಿ ಇಬ್ಬರು

ಉಪ ಬೀಜ ಪ್ರಮಾಣನ ನಿರ್ದೇಶಕರು ಇರುತ್ತಾರೆ. ಒಂಬತ್ತು ಸಹಾಯಕ ಬೀಜ ಪ್ರಮಾಣನ ನಿರ್ದೇಶಕರು, 5 ಬೀಜ ಪ್ರಮಾಣನ ನಿರೀಕ್ಷಕರು ಕ್ಷೇತ್ರ ತಪಾಸಣೆ ನಡೆಸಲು ಮತ್ತು ವಿವಿಧ ಬೀಜ ಸಂಸ್ಕರಣಾ ನಿರೀಕ್ಷಣಾ ಕಾರ್ಯದಲ್ಲಿ ಕನಿಷ್ಠ ಬೀಜ ಪ್ರಮಾಣನ ಮಟ್ಟವನ್ನು ಖಾತರಿಪಡಿಸಲು ನಿರತರಾಗಿರುತ್ತಾರೆ. ಅಲ್ಲದೆ 53 ಜನ ಬೀಜ ಸಂಸ್ಕರಣಾ ಸಹಾಯಕರು ಹಾಗು 65 ಅಧಿಕೃತ ಸಿಬ್ಬಂದಿಯೊಡಗೂಡಿ ಬೀಜ ಪ್ರಮಾಣನ ಕಾರ್ಯ ನಡೆಯುತ್ತಿದೆ.

ಹಣಕಾಸು ಪರಿಸ್ಥಿತಿ:—

ಸಂಸ್ಥೆಯ ಆದಾಯ ಮತ್ತು ವೆಚ್ಚಗಳು ಈ ಕೆಳಗಿನಂತಿದೆ:—

| ಕ್ರ ಸಂ. | ಆದಾಯ (ಲಕ್ಷಗಳಲ್ಲಿ) | ವೆಚ್ಚ (ಲಕ್ಷಗಳಲ್ಲಿ) | ಷರಾ (ಲಾಭ ಲಕ್ಷಗಳಲ್ಲಿ) |
|---|---|---|---|
| | ರೂ. | ರೂ. | ರೂ. |
| 1. | 1,06,78,000 | 1,02,29,000 | 4,49,000 |

ಎನ್.ಎಸ್.ಪಿ–111ರಲ್ಲಿ ಮಂಜೂರಾದ ಒಟ್ಟು 101.36 ರೂ. ಲಕ್ಷಗಳ ಅನುದಾನಕ್ಕೆ ಪ್ರತಿಯಾಗಿ ಪೂರ್ಣ ಹಣ ಬಿಡುಗಡೆಯಾಗಿರುತ್ತದೆ. 1995ರ ಮಾರ್ಚ್ ಅಂತ್ಯಕ್ಕೆ ಒಟ್ಟು 81.87 ಲಕ್ಷ ರೂ.ಗಳನ್ನು ಉಪಯೋಗಿಸಿಕೊಳ್ಳಲಾಗಿದೆ.

ಕರ್ನಾಟಕ ಕಾಂಪೋಸ್ಟ್ ಅಭಿವೃದ್ಧಿ ನಿಗಮ:—

1994–95ರ ಸಾಲಿನಲ್ಲಿ ಕರ್ನಾಟಕ ಕಾಂಪೋಸ್ಟ್ ಅಭಿವೃದ್ಧಿ ನಿಗಮವು 12,000 ಮೆ.ಟನ್ನು ಗುರಿಗೆ ಬದಲಾಗಿ 11,449 ಮೆ.ಟನ್ನುಗಳಷ್ಟು ಕಾಂಪೋಸ್ಟ್ ಉತ್ಪಾದಿಸಿದೆ.

ಪ್ರಸಕ್ತ ಸಾಲಿನಲ್ಲಿ 5443·927 ಮೆ·ಟನನ್ನು ಮಾರಾಟ ಮಾಡಿ ರೂ·41,81,017 ಗಳಷ್ಟು ವರಮಾನ ಗಳಿಸಿದೆ· ಬಡ್ಡಿ ಮತ್ತು ಸವಕಳಿ ಹೊರತಂತೆ ಒಟ್ಟು ವೆಚ್ಚವು ರೂ·32,04,442 ಬಡ್ಡಿ ಮತ್ತು ಸವಕಳಿಗೆ ಮುಂಚೆ ಆದಾಯವು ರೂ·9,76,575 ಇತ್ತು·

ಕರ್ನಾಟಕ ರಾಜ್ಯ ಅಗ್ರೋ ಕಾರನ್ ಪಾಡಕ್ಟ್ಸ್ ಲಿಮಿಟೆಡ್:—

ಕರ್ನಾಟಕ ರಾಜ್ಯ ಅಗ್ರೋ ಕಾರನ್ ಪ್ರಾಡಕ್ಟ್ಸ್ ಲಿಮಿಟೆಡಿನ ನಿರ್ವಹಣೆಯಲ್ಲಿ ಕೆಳಕಂಡ 3 ವಿಭಾಗಗಳನ್ನು ಹೊಂದಿದೆ·

1) ಮೈಜ(ಮು·ಜೋಳ) ಮಿಲ್ಲಿಂಗ್ ವಿಭಾಗ·
2) ಅಗ್ರೋ ಫೀಡ್ಸ್ ವಿಭಾಗ·
3) ವೀನಿಂಗ್ ಆಹಾರ ವಿಭಾಗ·

ಮೈಯಂಜ್ ಮಿಲ್ಲಿಂಗ್ ವಿಭಾಗವು 1995ರ ಮಾರ್ಚ್ ಅಂತ್ಯದವರೆಗೆ 8100 ಮೆಟ್ರಿಕ್ ಟನಗಳಷ್ಟು ಮುಸುಕಿನ ಜೋಳವನ್ನು ಸಂಸ್ಕರಿಸಿ ಒಟ್ಟು 425 ಲಕ್ಷ ರೂ·ಗಳಷ್ಟು ವಹಿವಾಟುಮಾಡಿದೆ· ಅಗ್ರೋ ಸೀಡ್ಸ್ ವಿಭಾಗವು ವಿವಿಧ ರೀತಿ ಸಂಸ್ಕರಿಸಿದ 10,771 ಮೆ·ಟನ ಆಹಾರವನ್ನು ಮಾರಾಟ ಮಾಡಿದೆ ಹಾಗೂ ಇದರ ಮೌಲ್ಯ 414 ಲಕ್ಷ ರೂ·ಗಳು · ಇದೇ ಕಾಲಾವಧಿಯಲ್ಲಿ ವೀನಿಂಗ್ ಆಹಾರ ವಿಭಾಗವು 20,577 ಮೆ·ಟನ್ನುಗಳಷ್ಟು ವೀನಿಂಗ್ ಆಹಾರವನ್ನು ಮಾರಾಟ ಮಾಡಿದೆ ಹಾಗೂ ಇದರ ಮೌಲ್ಯ 20·50 ಲಕ್ಷ ರೂ·ಗಳಾಗಿತ್ತು·

ಮೇಲೆ ಹೇಳಿದ ಈ ಅವಧಿಯಲ್ಲಿ ಕಂಪನಿಗೆ 18·00 ಲಕ್ಷ ರೂ·ಗಳಷ್ಟು ಆದಾಯವಾಗಿರುತ್ತದೆ· ಕಂಪನಿಯು ಈ ಸಾಲಿನಲ್ಲಿ 2889 ಲಕ್ಷ ರೂ· ವ್ಯಾಪಾರದ ವಹಿವಾಟನ್ನು ನಡೆಸಿದೆ· ನಿಗಮದ ಪ್ರಸಕ್ತ ಸಾಲಿನ ವಹಿವಾಟು ಈ ಕೆಳಗಿನಂತಿರುತ್ತದೆ·

| ಆದಾಯ (ಲಕ್ಷ ರೂ·ಗಳಲ್ಲಿ) | ರೂ· ಪೈ |
|---|---|
| 1) ವ್ಯಾಪಾರ | 2889·00 |
| 2) ಸೇವಾ ಶುಲ್ಕ | 1·00 |
| 3) ಇತರೆ ಆದಾಯ | 10·00 |
| 4) ದಾಸ್ತಾನಿನ ಒಟ್ಟು ಹೆಚ್ಚಳ | 15·00 |
| ಒಟ್ಟು ಮೊತ್ತ | 2915·00 |

| ವೆಚ್ಚ (ಲಕ್ಷ ರೂ·ಗಳಲ್ಲಿ) | ರೂ· ಪೈ |
|---|---|
| 1) ಕಚ್ಚಾ ವಸ್ತು ಬಳಕೆ, ಇತರೆ ತಯಾರಿಕೆ, ಆಡಳಿತ ಮತ್ತು ವ್ಯಾಪಾರ ವೆಚ್ಚ | 2861·07 |
| 2) ಸಾಲದ ಮೇಲಿನ ಬಡ್ಡಿ | 8·93 |
| 3) ಸವಕಳಿ ವೆಚ್ಚ | 27·00 |
| ಒಟ್ಟು | 2897·00 |
| ಈ ವರ್ಷದ ಆದಾಯ (ಲಕ್ಷ ರೂ·ಗಳಲ್ಲಿ) | 18·00 |

## ಕೃಷಿ ವಿಶ್ವವಿದ್ಯಾನಿಲಯ

### ಬೆಂಗಳೂರು

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಪ್ರಸ್ತುತ ವರದಿ ಅವಧಿಯಲ್ಲಿನ ಬೋಧನೆ, ಸಂಶೋಧನೆ ಮತ್ತು ವಿಸ್ತರಣ ಚಟುವಟಿಕೆಗಳು ಕೆಳಗಿನಂತಿವೆ:—

ಅ) ಬೋಧನೆ:—

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯವು ಬೆಂಗಳೂರು, ಮಂಗಳೂರು, ಶಿವಮೊಗ್ಗ, ಮಂಡ್ಯ, ಮೂಡಿಗೆರೆಗಳಲ್ಲಿ ಐದು ಬೋಧನಾ ಕಾಲೇಜುಗಳನ್ನು ಹೊಂದಿದ್ದು, ಅವು 8 ಪದವಿ ಕಾರ್ಯಕ್ರಮಗಳನ್ನು ಹೊಂದಿವೆ. ಅವು ಕೃಷಿ, ಪಶು, ವೈದ್ಯಕೀಯ, ಹೈನು ವಿಜ್ಞಾನ, ಕೃಷಿ ಮಾರಾಟ ಮತ್ತು ಸಹಕಾರ, ತೋಟಗಾರಿಕೆ, ರೇಷ್ಮೆ ವ್ಯವಸಾಯ, ಅರಣ್ಯಶಾಸ್ತ್ರ, ಮತ್ತು ಮೀನುಗಾರಿಕೆ ವಿಷಯಗಳಿಗೆ ಸಂಬಂಧಿಸಿದೆ. 521 ವಿದ್ಯಾರ್ಥಿಗಳಿಗೆ ಹಲವಾರು ಪದವಿ ಕಾರ್ಯಕ್ರಮಗಳಿಗಾಗಿ ವಿವಿಧ ಕಾಲೇಜುಗಳಲ್ಲಿ ಪ್ರವೇಶ ನೀಡಲಾಯಿತು. ಸ್ನಾತಕೋತ್ತರ ಕಾರ್ಯಕ್ರಮಗಳಲ್ಲಿ 105 ಡಾಕ್ಟರೇಟ್ ಪದವಿ ಕ್ರಮಗಳಿಗೂ ಹಾಗೂ 338 ಮಾಸ್ಟರ್ ಪದವಿ ಕಾರ್ಯಕ್ರಮಗಳಿಗೂ ಪ್ರವೇಶ ನೀಡಲಾಯಿತು.

ಕೃಷಿ ಕಾಲೇಜು, ಮಂಡ್ಯ ಹಾಗೂ ತೋಟಗಾರಿಕೆ ಕಾಲೇಜು ಮೂಡಿಗೆರೆ ಇವು 1991ರ ಡಿಸೆಂಬರನಲ್ಲಿ ಆರಂಭಿಸಲಾದ ಎರಡು ಹೊಸ ಕಾಲೇಜುಗಳಾಗಿದ್ದು, 8–11–93 ರಿಂ ತರಗತಿಗಳನ್ನು ನಡೆಸಲಾಗುತ್ತಿದೆ. ಫಾಕಲ್ಟಿ ಸದಸ್ಯರು, ಹಲವು ಪದವಿ ಕಾರ್ಯಕ್ರಮಗಳಿಗೆ ನಿರ್ಧಿಷ್ಟಪಡಿಸಲಾದ

ತರಗತಿಗಳೊಂದಿಗೆ ಸಂಶೋಧನಾ ಪ್ರಯೋಜನೆಗಳು, ಸ್ನಾತಕೋತ್ತರ ಸಂಶೋಧನಾ ಕಾರ್ಯಕ್ರಮಗಳು, ಸಲಹಾ ಸಮಿತಿ ಸದಸ್ಯರು, ವಿಚಾರ ಸಂಕಿರಣಗಳು, ಕಾರ್ಯಾಗಾರಗಳು, ವಿಸ್ತರಣಾ ಚಟುವಟಿಕೆಗಳು ಮುಂತಾದವುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

೧) ಸಂಶೋಧನೆ:—

ತಾಂತ್ರಿಕ ಕಾರ್ಯಕ್ರಮ ಯೋಜನೆ:—

1995—96ನೇ ಸಾಲಿಗೆ ಸಂಶೋಧನಾ ಕಾರ್ಯಕ್ರಮಗಳನ್ನು ಪರಿಗಣಿಸಲು ಸಂಶೋಧನಾ ಸಮಿತಿಯು 1995ರ ಮೇ ನಲ್ಲಿ ಸಂಬಂಧಪಟ್ಟ ವಲಯ ಸಂಶೋಧನಾ ಸಮಿತಿ ಮತ್ತು ವಲಯ ಸಂಶೋಧನಾ ಸೂತ್ರೀಕರಣ ಸಮಿತಿಗಳು, ತಿಪಟೂರು, ಮಂಡ್ಯ, ಮೂಡಿಗೆರೆ ನವಿಲೆ, ಬ್ರಹ್ಮಾವರ ಮತ್ತು ಬೆಂಗಳೂರುಗಳಲ್ಲಿ ನಡೆಸಿದ ಸಭೆಗಳಿಂದ ಸೂತ್ರೀಕರಿಸಲಾದ ತಾಂತ್ರಿಕ ಕಾರ್ಯಕ್ರಮಗಳಿಗೆ ಔಪಚಾರಿಕವಾಗಿ ಒಪ್ಪಿಗೆ ನೀಡಿತು. ವಲಯ—4ರಲ್ಲಿ 32 ಹೊಸ ಪ್ರಯೋಗಗಳನ್ನು ವಲಯ—6ರಲ್ಲಿ ಐದು ಪ್ರಯೋಗಗಳನ್ನು ವಲಯ—7ರಲ್ಲಿ 34 ಪ್ರಯೋಗಗಳನ್ನು, ವಲಯ—9ರಲ್ಲಿ 9 ಪ್ರಯೋಗಗಳನ್ನು ಹಾಗೂ ವಲಯ—10ರಲ್ಲಿ 'ಏಳು ಪ್ರಯೋಗಗಳನ್ನು ತೆಗೆದುಕೊಳ್ಳಲು ಯೋಜಿಸಲಾಗಿದೆ.

2) ಸಂಶೋಧನಾ ಸಮಿತಿ:—

ಕೃಷಿ ವಿಶ್ವವಿದ್ಯಾನಿಲಯದ 426.75 ಲಕ್ಷ ರೂ.ಗಳ ಅನುದಾನದೊಂದಿಗೆ 155 ಹೊಸ ಸಂಶೋಧನಾ ಯೋಜನೆಗಳಿಗೆ ಸಂಶೋಧನಾ ಸಮಿತಿಯು ಸಸ್ಯ, ಪ್ರಾಣಿ, ಮೀನುಗಾರಿಕೆ

ಹಾಗೂ ಪಶುಪಾಲ ವಿಜ್ಞಾನಗಳಿಗೆ ಸಂಬಂಧಿಸಿದಂತೆ ಒಟ್ಟಿಗೆ ನಿಗದಿತ 34 ಭಾರತೀಯ ಕೃಷಿ ಅನುಸಂಧಾನ ಪರಿಷತ್ ಸಹ ಯೋಜನೆ ಪ್ರಾಯೋಜನೆಗಳು, 31 ಭಾರತೀಯ ಕೃಷಿ ಅನುಸಂಧಾನ ಪರಿಷತ್ತಿನ ತಾತ್ಕಾಲಿಕ ಸಂಶೋಧನಾ ಪ್ರಾಯೋಜನೆಗಳು 28 ಭಾರತ ಸರ್ಕಾರದ ಅನುಧಾನಿತ ಪ್ರಾಯೋಜನೆಗಳು, 17 ರಾಜ್ಯ ಸರ್ಕಾರದ ತಾತ್ಕಾಲಿಕ ಯೋಜನೆಗಳು, ಹಾ ಇತರೆ ಸಂಸ್ಥೆಗಳಿಂದ ಧನ ಸಹಾಯ ಪಡೆದ 45 ಸಂಶೋಧನಾ ಪ್ರಾಯೋಜನೆಗಳ ಕಾರ್ಯಕ್ರಮ ಮುಂದುವರಿಯುತ್ತಿ,ದ

3) ತಳಿಗಳ ಬಿಡುಗಡೆ :—

1994ರಲ್ಲಿ ಸಾಮಾನ್ಯ ಸಾಗುವಳಿ ಉದ್ದೇಶಗಳಿಗಾಗಿ ಕೆಳಗಿನ ತಳಿಗಳನ್ನು ಬಿಡುಗಡೆ ಮಾಡಲಾಗಿದೆ.

1) ಬತ್ತ :— ಅ) ಡಿ.ಡಬ್ಲ್ಯು.ಆರ್–4107(ಹೇಮಾವತಿ)
ಆ) ಐ.ಇ.ಟಿ–7956(

2) ಹಸರು ಕಾಳು :— ಅ) [illegible].ಡಿ.ಎಂ –84–178(ಕಪ್ಪ

3) ರಾಗಿ :— ಅ) ಇಂಡಾಫ್–15

4) ಗೋಡಂಬಿ :— ಉಲ್ಲಾಳ–3

[illegible]) ವಿಸ್ತರಣೆ :—

ದಕ್ಷಿಣ ವಲಯದ ಆಧುನಿಕ ಬೇಸಾಯ ಕ್ರಮಗಳು ಪುಸ್ತಕಗಳನ್ನು ಪ್ರಕಟಿಸಲಾಗಿದೆ. ರೈತರಿಗೆ ತಂತ್ರಜ್ಞಾನ ಪ್ರಸರಣೆಗೆ ವಿವಿಧ ಮಾಧ್ಯಮಗಳನ್ನು ಬಳಸಿಕೊಳ್ಳಲಾಯಿ 42 ಕ್ಷೇತ್ರೋತ್ಸವಗಳನ್ನು ಹಾಗೂ ಬೆಂಗಳೂರಿನಲ್ಲಿ ಒ ಕೃಷಿ ಮೇಳವನ್ನು ಏರ್ಪಡಿಸಲಾಯಿತು.

ವಿವಿಧ ಆವರಣಗಳ ಪ್ರಯೋಗಾಲಯಗಳು, ಕ್ಷೇತ್ರ ಪ್ರಾತ್ಯಕ್ಷಿಕೆಗಳು, ವಿವಿಧ ಸಂಶೋಧನಾ ಕ್ಷೇತ್ರಗಳಲ್ಲಿ ಗ್ರಾಮೀಣ ಅಭ್ಯಾಸದಿಂ ಕಾರ್ಯಕ್ರಮಗಳು ಮುಂತಾದ ವಿಸ್ತರಣಾ ಚಟುವಟಿಕೆಗಳನ್ನು ಕೈಗೊಳ್ಳಲಾಗುತ್ತದೆ. ಯುವ ರೈತರು ಹಾಗೂ ರೈತ ಮಹಿಳೆಯರಿಗೆ 38 ಸಾಂಸ್ಥಿಕ ತರಬೇತಿ ಕಾರ್ಯಕ್ರಮಗಳು, ಗ್ರಾಮಮಟ್ಟದ ಪೂರ್ಣ ಹಂಗಾಮು ತರಬೇತಿ ಕಾರ್ಯಕ್ರಮಗಳು 14 ಆವರಣದಲ್ಲಿನ ತರಬೇತಿ, 27 ಆವರಣದ ಹೊರಗಿನ ತರಬೇತಿಗಳು ಹಾಗೂ ಸೇವಾ ನಿರತ ಸಿಬ್ಬಂದಿಗೆ 17 ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸಲಾಯಿತು. ಬೇರೆ ತರಬೇತಿ ಘಟಕ 36 ಆವರಣದ ತರಬೇತಿಗಳು ಹಾಗೂ 299 ಆವರಣದ ಹೊರಗಿನ ತರಬೇತಿ ಕಾರ್ಯಕ್ರಮಗಳನ್ನು ನಡೆಸಿರುತ್ತದೆ. ಇದಲ್ಲದೆ ಸಮ್ಮೇಳನಗಳನ್ನು ಏರ್ಪಡಿಸಲಾಗಿರುತ್ತದೆ.

ಕೃಷಿ ಇಲಾಖೆಯಿಂದ ಏರ್ಪಡಿಸಿದ 12 ದ್ವೈ ಮಾಸಿಕ ಹಾಗೂ 12 ಹಂಗಾಮು ಪೂರ್ವ ಕಾರ್ಯಾಗಾರಗಳಲ್ಲಿ ವಿಶ್ವವಿದ್ಯಾನಿಲಯದ ವಿಜ್ಞಾನಿಗಳು ಭಾಗವಹಿಸಿರುತ್ತಾರೆ.

ಮುಂದುವರಿದಿದೆ.

1995–96ನೇ ಸಾಲಿನ ಅಂದಾಜು ಆಯವ್ಯಯ

ಯೋಜನೆ ಮತ್ತು ಯೋಜನೇತರಗಳಲ್ಲಿ, ಬೋಧನೆ, ಸಂಶೋಧನೆ ಹಾಗೂ ವಿಸ್ತರಣೆ ಹಾಗೂ ಸಾಮಾನ್ಯ ಆಡಳಿತ ಘಟಕಗಳಿಗೆ ಆಗಬೇಕಾದ ವೆಚ್ಚದ ವಿವರವು ಕೆಳಕಂಡಂತಿದೆ:–

| ಕ್ರ ಸಂ | ವಿವರ | ಯೋಜನೇತರ | ಶೇಕಡಾ ವಾರು ಭಾಗ | ಯೋಜನೆ | ಶೇ·ವಾರು ಭಾಗ | ಒಟ್ಟು | ಶೇ·ವಾರು ಭಾಗ |
|---|---|---|---|---|---|---|---|
| 1. | ಬೋಧನೆ | 730·12 | 38·71 | 680·11 | 61·48 | 1410·23 | 47·04 |
| 2. | ಸಂಶೋಧನೆ | 515·05 | 27·31 | 389·00 | 34·99 | 904·05 | 30·16 |
| 3. | ವಿಸ್ತರಣೆ | 112·03 | 5·94 | 16·30 | 1·47 | 128·33 | 4·28 |
| 4. | ಸಾಮಾನ್ಯ ಆಡಳಿತ | 528·80 | 28·04 | 26·29 | 2·36 | 555·09 | 18·52 |
| | ಒಟ್ಟು | 1856·00 | 100·00 | 1111·70 | 100·00 | 2997·70 | 100·00 |

— ೮ —

ಮುದ್ರಕರು :–ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಮುದ್ರಣಾಲಯ ಬೆಂಗಳೂರು–1

